Vol - 12 May 2014 Issue No. 05 ₹ 10.00/-




# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*





The Bharat Scouts & Guides, Karnataka extends *Hearty Congratulations* and *Best Wishes*



**Sri Narendra Damodardas Modi**
Hon'ble Prime Minister of INDIA



.V. Sadanada Gowda
'ble Minister for Railway's
ernment of India & Prisident
harat Scouts and Guides
Karnataka



Sri Ananth Kumar
Hon'ble Minister for
Chemicals & Fertilizers
Government of India



Sri M. Venkaiah Naidu
Hon'ble Minister for
Urban Development
& Parliamentary Affairs
Government of India



Sri G.M. Siddeshwara
Hon'ble Minister of State
for Civil Aviation
Government of India



Sri B.I. Nagarale, IAS(Rtd.), National Commissioner, BS&G, India Unviling Plaque of wedding of Lord & Lady Baden Powel at NTC, Pachamarhi on 11th May 2014. It was donated by Miss Krupa Vijay ALT(Guides) & Secretary SLA, Bangalore North District. Smt. M.N. Machamma, DD(G), LT and others are seen.



Sri B.I. Nagarale, National Commissioner Presenting the LT(Guide) Hon'ble Charge to Smt. C. Manjula I/c STC(Guide), BS&G, Karnataka on 10th May 2014 at NTC, Pachamarhi. Sri N.A. Khan, Vice President BS&G, Sri M.A. Khalid International Commissioner, BS&G & Dr. V. Vijayalakshmi, Chief Commissioner (Guides), India are also seen.



Veteran Leaders Trainers of the Country were Felicited at NTC Pachamarhi on 10th May 2014. Smt. S.K. Prabha, LT(G), Smt. B.D. Shantha, LT(G), Smt. N.K. Chaya, LT(G), Sri M.M. Londe, LT(S), Smt. C.A. Meenakshi, LT(B), Smt. Juliyana Lasrado, LT(C) and Smt. Prema C. Mangalore, LT(G) are seen in the photograph with the memontos.



Sri A. Devaprakash, Director Karnataka State Secondary Education Board & DCC Bangalore North Dist. Inaugurating New Dist. Office allong with Sri Kondajji B. Shanmukhappa, SCC, Sri M. Neelaiah, President, B'lore North Dist. Sri Premkumar, DC(S), Smt. Vanitha Narayan, DC(G), Sri B.K. Sheshadri, Dist. Secretary are seen.



Students of Rastriya Samskrut Samsthan, Sringeri who under want Basic Course for Scout Masters Seen with the principal, Teachers & Staff of the Training Course held at Dist. Training Center, Pilikula, Mangalore from 3rd to 10th March 2014.



Scouts & Guide who Participated in the Preparatory Camp at Dr. V.S. Acharya Dist. Training Center Pragathi Nagar, Near Manipal, Udupi.

# *EDITORIAL.............*

*The religious and ethical values in Scout/ Guide movement prevails from the day BP started writing Aids to Scouting and he referred many religious books before going to Brown Sea Islands to run the 1st Scout Camp. In many places he has made it clear that every Scout should believe in God and the Scouting does not belong to them who don't believe in god.*

*The ethics what Scouting has adopted is based on many religious values followed all over world. The part of promise and law also strongly support the concept of God and religion. Recently when I was in NTC witnessing the Sandhan, I felt very happy and saw the trainers doing a great job. In my interaction and slot I made it very clear that the Strategic Planning should be made basic for such gatherings, which will help BS&G to deliver the right programme activities to youth.*

*Further another area where I beg to differ is that despite Scouting/ Guiding is by the youth, to the youth and for the youth, the trainers who are active from past 2 or 3 decades are planning and reviewing the programme policies, which may suit or may not, youth may accept or not, but we are at it. Rather than looking behind we should look forward. Experience and expertise are good tools to run the organization but programme policy should come from the young minds.*

*When parents and teaching faculty is finding tough times to convince youth, the universities are re inventing systems. The youth who are with us in BS&G are attracted with 2 major issues one for the weightage they get from school education and second to get future placements in Government or semi Government. Also the census that we are projecting today is non healthy. If we need to revamp and show real census, we have to attract the youth in better placed programme policies. History is good to know, always history can not be repeated.*

*Without leaps of imagination, or dreaming, we lose the excitement of possibilities. Dreaming, after all, is a form of planning. I believe strongly that dreams of youth should be realized in BS&G and not the fantasies of adults.*

***M.A. KHALID***
*State Secretary*

# ರಾಜ್ಯ ಮುಖ್ಯ ಆಯುಕ್ತರ ನುಡಿ..........................

ಆತ್ಮೀಯರೇ,

2014-15ರ ವಾರ್ಷಿಕ ಶಾಲಾದಿನಚರಿ ಪ್ರಾರಂಭವಾಗಿದೆ. ಇದರೊಂದಿಗೆ ಸ್ಕೌಟ್-ಗೈಡ್ ದಿನಚರಿ ಕೂಡ ಪ್ರಾರಂಭವಾಗಿದೆ. ದಿನಾಂಕ 5 ಜೂನ್ 2014ರಂದು ವಿಶ್ವದೆಲ್ಲೆಡೆ ಪರಿಸರ ದಿನಾಚರಣೆ ಆಚರಿಸುತಿದ್ದು ನಮ್ಮ ಚಳವಳಿಯ ದಳ-ಘಟಕಗಳು, ಸ್ಥಳೀಯ ಸಂಸ್ಥೆ ಹಾಗು ಜಿಲ್ಲಾ ಸಂಸ್ಥೆಗಳು ಸಾರ್ವಜನಿಕರ - ಸರ್ಕಾರದ ವಿವಿಧ ಇಲಾಖೆಗಳ, ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿಗಳ- ಕರ್ನಾಟಕ ರಾಜ್ಯ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಯ ಜಿಲ್ಲಾ ಘಟಕಗಳ - ಸ್ಥಳೀಯ ಪಂಚಾಯತ್‌ರಾಜ್ ಇಲಾಖೆಯ ಆಡಳಿತ ಮಂಡಳಿಯ ಸಹಕಾರ - ಸಹಯೋಗದೊಂದಿಗೆ ಒಂದು ಕ್ರಿಯಾತ್ಮಕ ಕಾರ್ಯಕ್ರಮವನ್ನು ಯೋಜಿಸಿ ಆಚರಿಸಬೇಕೆಂದು ಹಾಗು ಪರಿಸರಸಂರಕ್ಷಣೆ ಬಗ್ಗೆ ಸ್ಕೌಟ್ಸ್ / ಗೈಡ್ಸ್/ ರೋವರ್ಸ್ / ರೇಂಜರ್ಸ್‌ಗಳಿಂದ ಕಾರ್ಯಕ್ರಮವನ್ನು ಏರ್ಪಡಿಸಿ, ಸಾರ್ವಜನಿಕರಿಗೆ ಪರಿಸರವನ್ನು ಉಳಿಸಿ-ಬೆಳಸುವಲ್ಲಿ ಬೇಕಾಗುವ ಉಪಯುಕ್ತ ಮಾಹಿತಿಗಳನ್ನು ನೀಡುವುದರ ಮೂಲಕ ವಿಶ್ವಪರಿಸರ ದಿನಾಚರಣೆಯನ್ನು ನಿಮ್ಮಗಳ ಹಂತದಲ್ಲಿ ಯಶಸ್ವಿಗೊಳಿಸಬೇಕಾಗಿ ನನ್ನ ಸಹೋದ್ಯೋಗಿಗಳಲ್ಲಿ ಸೂಚಿಸುತ್ತೇನೆ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆಯ ಅಧ್ಯಕ್ಷರು, ಕರ್ನಾಟಕದ ಗೌರವಾನ್ವಿತ ಮಾಜಿ ಮುಖ್ಯಮಂತ್ರಿಗಳು, ಇತ್ತೀಚೆಗೆ ಜರುಗಿದ ಲೋಕಸಭಾ ಚುನಾವಣೆಯಲ್ಲಿ ಬೆಂಗಳೂರು ಉತ್ತರ ಕ್ಷೇತ್ರದಿಂದ ಲೋಕಸಭಾ ಸದಸ್ಯರಾಗಿ ಚುನಾಯಿತರಾದ ಸನ್ಮಾನ್ಯ ಶ್ರೀ ಡಿ.ವಿ. ಸದಾನಂದಗೌಡ ಅವರು ನೂತನವಾಗಿ ರಚಿತವಾದ ಭಾರತದ ಪ್ರಧಾನಮಂತ್ರಿ ಗೌರವಾನ್ವಿತ ಶ್ರೀ ನರೇಂದ್ರ ಮೋದಿ ಅವರ ಕೇಂದ್ರ ಸರ್ಕಾರದ ಸಂಪುಟದಲ್ಲಿ ಭಾರತ ಸರ್ಕಾರದ ರೈಲ್ವೆ ಸಚಿವರಾಗಿ ದಿನಾಂಕ: 26.05.2014 ರಂದು ಪ್ರಮಾಣವಚನ ಸ್ವೀಕರಿಸಿರುವುದು ನಮಗೆಲ್ಲಾ ಅತ್ಯಂತ ಸಂತೋಷ ಹಾಗು ಗೌರವದ ವಿಷಯವಾಗಿರುತ್ತದೆ.

ಇದೇ ಸಂದರ್ಭದಲ್ಲಿ ಬೆಂಗಳೂರು ದಕ್ಷಿಣ ಲೋಕಸಭಾ ಕ್ಷೇತ್ರದಿಂದ ಚುನಾಯಿತರಾದ ಸನ್ಮಾನ್ಯ ಶ್ರೀ ಅನಂತಕುಮಾರ್ ಅವರು ಕೇಂದ್ರ ಸರ್ಕಾರದ ಸಂಪುಟದಲ್ಲಿ ರಾಸಾಯನಿಕ ಮತ್ತು ರಸಗೊಬ್ಬರ ಇಲಾಖೆಗಳ ಸಚಿವರಾಗಿ ಪ್ರಮಾಣ ವಚನವನ್ನು ಸ್ವೀಕರಿಸಿರುವುದು ಹಾಗು ಇವರೊಂದಿಗೆ ರಾಜ್ಯದ ರಾಜ್ಯ ಸಭೆಯ ಸದಸ್ಯರಾದ ಸನ್ಮಾನ್ಯ ಶ್ರೀ ಎಂ. ವೆಂಕಯ್ಯನಾಯ್ಡು ಅವರು ಕೇಂದ್ರ ಸರ್ಕಾರದ ಸಂಪುಟದಲ್ಲಿ ನಗರಾಭಿವೃದ್ಧಿ ಮತ್ತು ಸಂಸದೀಯ ವ್ಯವಹಾರಗಳ ಸಚಿವರಾಗಿ ಹಾಗು ದಾವಣಗೆರೆ ಲೋಕಸಭಾ ಕ್ಷೇತ್ರದಿಂದ ಚುನಾಯಿತರಾದ ಸನ್ಮಾನ್ಯ ಶ್ರೀ ಜಿ.ಎಂ. ಸಿದ್ದೇಶ್ವರ ಅವರು ಕೇಂದ್ರ ಸರ್ಕಾರದ ಸಂಪುಟದಲ್ಲಿ ವಿಮಾನಯಾನ ಖಾತೆಯ ಸಹಾಯಕ ಸಚಿವರಾಗಿ ಪ್ರಮಾಣವಚನ ಸ್ವೀಕರಿಸಿರುವುದು ನಮಗೆಲ್ಲಾ ಸಂತೋಷದ ವಿಷಯವಾಗಿರುತ್ತದೆ.

ಕರ್ನಾಟಕದ ಎಲ್ಲಾ ಸ್ಕೌಟ್ಸ್-ಗೈಡ್ಸ್-ರೋವರ್ಸ್-ರೇಂಜರ್ಸ್ ಹಾಗು ಎಲ್ಲಾ ಹಂತದ ಪದಾಧಿಕಾರಿಗಳು ಮತ್ತು ಕಾರ್ಯಕರ್ತರುಗಳ ಪರವಾಗಿ ಭಾರತದ ನೂತನ ಗೌರವಾನ್ವಿತ ಪ್ರಧಾನಮಂತ್ರಿಗಳಾದ ಶ್ರೀ ನರೇಂದ್ರ ಮೋದಿ, ಕರ್ನಾಟಕ ರಾಜ್ಯದಿಂದ ಕೇಂದ್ರ ಸಂಪುಟದಲ್ಲಿ ಸನ್ಮಾನ್ಯ ಸಚಿವರುಗಳಾದ ಶ್ರೀ ಡಿ.ವಿ. ಸದಾನಂದಗೌಡ, ಶ್ರೀ ಅನಂತಕುಮಾರ್, ಶ್ರೀ ಎಂ. ವೆಂಕಯ್ಯನಾಯ್ಡು, ಶ್ರೀ ಜಿ.ಎಂ. ಸಿದ್ದೇಶ್ವರ ಅವರುಗಳಿಗೆ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ನಾನು ಕಳೆದ ಹಲವಾರು ಸಭೆ-ಸಮಾರಂಭಗಳಲ್ಲಿ, ತರಬೇತಿ ಶಿಬಿರ ಹಾಗು ಜಿಲ್ಲಾ ಸಂಸ್ಥೆಗಳಿಗೆ ಭೇಟಿನೀಡಿದ ಸಂದರ್ಭದಲ್ಲಿ ಹಾಗು ರಾಜ್ಯ ಸಂಸ್ಥೆಯ ವಿವಿಧ ಸಭೆ-ಸಮಾರಂಭಗಳಲ್ಲಿ ಹಲವು ಬಾರಿ ಮನವಿ ಮಾಡಿರುವಂತೆ, 2014-15ನೇ ವರ್ಷದ ಸೆಪ್ಟೆಂಬರ್-ಅಕ್ಟೋಬರ್ ಒಳಗಾಗಿ ರಾಜ್ಯದ ಎಲ್ಲಾ ಜಿಲ್ಲಾ ಸಂಸ್ಥೆಗಳು ಮೂಲ

ತರಬೇತಿ ಶಿಬಿರಗಳನ್ನು ಏರ್ಪಡಿಸಬೇಕೆಂದು ಕೋರುತ್ತೇನೆ. ಜಿಲ್ಲೆಗಳಲ್ಲಿ ರಾಜ್ಯ ಸಂಸ್ಥೆಯ ಪ್ರತಿನಿಧಿಯಾಗಿ ಕಾರ್ಯನಿರ್ವಹಿಸುತ್ತಿರುವ ಜಿಲ್ಲಾ ಸಂಘಟಕರುಗಳ ಹಾಗು ಜಿಲ್ಲಾ ಸ್ಕೌಟ್ ಗೈಡ್ ತರಬೇತಿ ಆಯುಕ್ತರುಗಳ ಜವಾಬ್ದಾರಿ ಹಾಗು ಹೊಣೆಗಾರಿಕೆಯಿದೆ ಎಂಬುದನ್ನು ಸಂಬಂಧಪಟ್ಟವರುಗಳಿಗೆ ಸೂಚಿಸುತ್ತೇನೆ. ರಾಜ್ಯ ಸಂಸ್ಥೆಯು ಜಿಲ್ಲಾ ಸಂಸ್ಥೆಗಳು ಆಯೋಜಿಸುವ ತರಬೇತಿ ಶಿಬಿರಗಳನ್ನು ಯಶಸ್ವಿಗೊಳಿಸಲು ಅವಶ್ಯವಿರುವ ಸಹಾಯ – ಸಹಕಾರ – ಮಾರ್ಗದರ್ಶನ ಮಾಡಲು ಉತ್ಸುಕರಾಗಿದ್ದೇವೆ ಎಂಬುದನ್ನು ರಾಜ್ಯದ ಎಲ್ಲಾ ಹಂತದ ನಾಯಕ–ನಾಯಕಿಯರುಗಳ ಗಮನಕ್ಕೆ ತರಬಯಸುತ್ತೇನೆ.

ಈ ಹಿಂದೆ ನಾವುಗಳು ಹಲವಾರು ಸಭೆ – ಸಮಾರಂಭ – ಸಮಾವೇಶಗಳಲ್ಲಿ ಹಾಗು ತರಬೇತಿ ಶಿಬಿರಗಳಲ್ಲಿ ಚರ್ಚಿಸಿದಂತೆ ಹಾಗು ನಮ್ಮಗಳ ವಾರ್ಷಿಕ ಕ್ರಿಯಾಯೋಜನೆಯಲ್ಲಿ ಅಳವಡಿಸಿಕೊಂಡಿರುವಂತೆ, ಸಮುದಾಯ ಅಭಿವೃದ್ಧಿ ಶಿಬಿರ ಏರ್ಪಡಿಸುವುದು ಚಳವಳಿಯ ಧ್ಯೇಯೋದ್ದೇಶದಂತೆ ಕಡ್ಡಾಯ ಹಾಗು ನಿರ್ವಹಿಸಲೇಬೇಕಾದ ಹಲವಾರು ಕಾರ್ಯಕ್ರಮಗಳಲ್ಲಿ ಮಹತ್ವದ್ದು ಎಂದು ಭಾವಿಸುತ್ತೇನೆ. ನನ್ನ ಸಹೋದ್ಯೋಗಿಗಳಲ್ಲಿ ದಳ – ಘಟಕಗಳ ನಾಯಕ – ನಾಯಕರುಗಳಲ್ಲಿ ನನ್ನ ಮನವಿ, 2014–15ನೇ ವರ್ಷದಲ್ಲಿ ನಾವೆಲ್ಲರೂ ಪ್ರತಿಜ್ಞೆ ಮಾಡುವುದು ಅವಶ್ಯಕವೆಂದು ಭಾವಿಸುತ್ತೇನೆ. ಆದ್ದರಿಂದ ರಾಜ್ಯದ ಎಲ್ಲಾ ದಳ–ಘಟಕಗಳು, 225 ಸ್ಥಳೀಯ ಸಂಸ್ಥೆಗಳು ಹಾಗು 33 ಜಿಲ್ಲಾ ಸಂಸ್ಥೆಗಳು ಮಾಡಬೇಕಾದ ಪ್ರತಿಜ್ಞೆ – ನಾವು 2014–15ನೇ ಸಾಲಿನಲ್ಲಿ ಕನಿಷ್ಠ ಒಂದಾದರೂ ಸಮುದಾಯ ಅಭಿವೃದ್ಧಿ ಶಿಬಿರವನ್ನು ಶಾಲೆಯಲ್ಲಿ, ನಾನು ನಡೆಸುವ ಮುಕ್ತ ದಳದ ಪರಿಸರದಲ್ಲಿ, ಸ್ಥಳೀಯ ಸಂಸ್ಥೆ ಹಾಗು ಜಿಲ್ಲಾ ಸಂಸ್ಥೆಗಳು – ಗ್ರಾಮ ಪಂಚಾಯತಿ – ತಾಲ್ಲೂಕ್ ಪಂಚಾಯತ್ – ಜಿಲ್ಲಾ ಪಂಚಾಯತ್‌ಗಳ ಸಹಯೋಗದೊಂದಿಗೆ ಸಮುದಾಯ ಅಭಿವೃದ್ಧಿ ಶಿಬಿರವನ್ನು ಏರ್ಪಡಿಸಿ ನಮ್ಮ ಚಳವಳಿಯ ಧ್ಯೇಯದ ಉದ್ದೇಶವನ್ನು ಈಡೇರಿಸಿದ ಹೆಮ್ಮೆ ನಿಮ್ಮದಾಗಲೆಂದು ಆಶಿಸುತ್ತೇನೆ. ನಿಮ್ಮ ವ್ಯಾಪ್ತಿಯಲ್ಲಿ ಸಮುದಾಯ ಅಭಿವೃದ್ಧಿ ಶಿಬಿರವನ್ನು ಏರ್ಪಡಿಸಿ ವಿವರಗಳನ್ನು ರಾಜ್ಯ ಸಂಸ್ಥೆಗೆ ಪ್ರಕಟಣೆಗೆ ಕಳುಹಿಸಲು ಸೂಚಿಸುತ್ತೇನೆ.

ನಿಮಗೆಲ್ಲಾ ತಿಳಿದಿರುವಂತೆ ಜುಲೈ 13, 2014 ರಿಂದ 19 ಜುಲೈ 2014ರವರೆಗೆ ರಾಜ್ಯದ ಹೆಮ್ಮೆಯ ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ 27ನೇ ರಾಜ್ಯ ಸ್ಕೌಟ್ಸ್–ಗೈಡ್ಸ್ ಜಾಂಬೋರಿ ನಡೆಸಲು ಸಿದ್ಧತೆಗಳು ನಡೆಯುತ್ತಿದ್ದು, ಎಲ್ಲಾ ಜಿಲ್ಲಾ ಸಂಸ್ಥೆಗಳಿಗೆ ರಾಜ್ಯ ಸಂಸ್ಥೆಯಿಂದ ಜಿಲ್ಲೆಗಳಿಗೆ ನೀಡಿರುವ ಕೋಟಾದ ವಿವರಗಳೊಂದಿಗೆ ಪತ್ರವನ್ನು ಕಳುಹಿಸಲಾಗಿದೆ. ಬಹಳ ವರ್ಷಗಳ ನಂತರ ನಮ್ಮ ಸಂಸ್ಥೆಯ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ 4000ಕ್ಕೂ ಅಧಿಕ ಸ್ಕೌಟ್ಸ್/ಗೈಡ್ಸ್/ರೋವರ್ಸ್/ರೇಂಜರ್ಸ್ ದಳ–ಘಟಕಗಳ ನಾಯಕ–ನಾಯಕಿಯರುಗಳು – ಸ್ಥಳೀಯ – ಜಿಲ್ಲೆ ಹಾಗು ರಾಜ್ಯ ಸಂಸ್ಥೆಗಳ ವಿವಿಧ ಹಂತದ ಪದಾಧಿಕಾರಿಗಳು, 300ಕ್ಕೂ ಹೆಚ್ಚು ಕಾರ್ಯಕರ್ತರುಗಳಿಗೆ ಮೇಲ್ಕಂಡ ಜಾಂಬೋರೇಟ್ ಯಶಸ್ವಿಯಾಗಿ ಆಚರಿಸುವುದಕ್ಕೆ ಬೇಕಾದ ಸೌಲಭ್ಯಗಳನ್ನು ಒದಗಿಸುವುದಕ್ಕೆ ಸಿದ್ಧತೆಯನ್ನು ಮಾಡಲಾಗುತ್ತಿದೆ. ನಿಮ್ಮ ಜಿಲ್ಲೆಗಳಿಗೆ ನೀಡಿರುವ ಕೋಟಾ ಪ್ರಕಾರ ನೀವೆಲ್ಲರೂ 27ನೇ ರಾಜ್ಯ ಜಾಂಬೋರೇಟ್‌ನಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸಲು ತಯಾರಾಗಿ ಬನ್ನಿ ಎಂದು ಸೂಚಿಸುತ್ತೇನೆ.

ಸಹೋದ್ಯೋಗಿಗಳಲ್ಲಿ ನನ್ನ ಮನವಿ–ತಕ್ಷಣ ನಿಮ್ಮ ಜಿಲ್ಲೆಯಲ್ಲಿ ಮೂಲ ತರಬೇತಿ ಶಿಬಿರವನ್ನು ಏರ್ಪಡಿಸಿ ಯಶಸ್ವಿಗೊಳಿಸಿರಿ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

# ರಾಜ್ಯ ವಾರ್ತೆಗಳು.................

## ರಾಷ್ಟ್ರಪತಿ ಸ್ಕೌಟ್ಸ್ ಪೂರ್ವ ಸಿದ್ಧತಾ ಪರೀಕ್ಷಾ ಶಿಬಿರ

ದಿನಾಂಕ 20-04-2014 ರಿಂದ 24-04-2014 ರ ವರೆಗೆ ರಾಷ್ಟ್ರಪತಿ ಸ್ಕೌಟ್ಸ್ ಪೂರ್ವ ಸಿದ್ಧತಾ ತರಬೇತಿ ಮತ್ತು ಪೂರ್ವ ಪರೀಕ್ಷಾ ಶಿಬಿರವನ್ನು ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ ಇಲ್ಲಿ ಸಂಘಟಿಸಲಾಯಿತು. ರಾಜ್ಯದ 15 ಜಿಲ್ಲೆಗಳಿಂದ 172 ಸ್ಕೌಟ್ಸ್, 19 ಶಿಕ್ಷಕರು, 14 ಶಿಬಿರ ಸಿಬ್ಬಂದಿಗಳು ಹಾಗು 5 ಸೇವಾ ಸ್ಕೌಟ್ಸ್ ಭಾಗವಹಿಸಿದ್ದರು.

ದಿನಾಂಕ 20-04-2014 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಸ್ಕೌಟ್‌ಗಳನ್ನುದ್ದೇಶಿಸಿ ಮಾತನಾಡಿ ಶುಭಾಶಯಗಳನ್ನು ತಿಳಿಸಿದರು.

ಶಿಬಿರವು ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಇವರ ಉಸ್ತುವಾರಿಯಲ್ಲಿ ಜರುಗಿತು. ಶ್ರೀ ಎಂ.ಪ್ರಭಾಕರ್ ಭಟ್ ಎಲ್.ಟಿ. (ಸ್ಕೌಟ್ಸ್) ಶಿಬಿರದ ನಾಯಕರಾಗಿದ್ದರು. ಶಿಬಿರವನ್ನು ನಾಲ್ಕು ಉಪ ಶಿಬಿರಗಳನ್ನಾಗಿ ವಿಂಗಡಿಸಿದ್ದು, ಶ್ರಿ ಸಿ.ಎನ್. ಮಹೇಶ್ ಎ.ಎಲ್.ಟಿ.(ಸ್ಕೌಟ್ಸ್) ಚಿತ್ರದುರ್ಗ, ಶ್ರೀ ಜೆ.ಎಸ್. ವಿಜಯ್ ಎ.ಎಲ್.ಟಿ.(ಸ್ಕೌಟ್ಸ್) ದಾವಣಗೆರೆ, ಶ್ರೀ ನಾಗೇಶ್, ಆರ್. ಶಿವಪೂರ ಎ.ಎಲ್.ಟಿ.(ಸ್ಕೌಟ್ಸ್), ಚಿತ್ರದುರ್ಗ ಮತ್ತು ಶ್ರೀ ಎ.ಎಲ್. ಶೇಖ್ ಸೂರಣಗಿ, ಎಲ್.ಟಿ.(ಸ್ಕೌಟ್ಸ್) ಹಾವೇರಿ ಇವರುಗಳು ನಾಯಕರಾಗಿ ಕಾರ್ಯನಿರ್ವಹಿಸಿದರು.

ಶಿಬಿರದಲ್ಲಿ ಪ್ರವೇಶ್, ಪ್ರಥಮ ಸೋಪಾನ್, ದ್ವಿತೀಯ ಸೋಪಾನ್, ತೃತೀಯ ಸೋಪಾನ್ ಹಾಗೂ ರಾಜ್ಯ ಪುರಸ್ಕಾರದ ವರೆಗಿನ ಎಲ್ಲಾ ಕೌಶಲ್ಯಗಳನ್ನು ಪುನರಾವರ್ತಿಸಲಾಯಿತು ಮತ್ತು ಪರೀಕ್ಷಿಸಲಾಯಿತು. ರಾಷ್ಟ್ರಪತಿ ಸ್ಕೌಟ್ಸ್‌ಗಳ ಅವಶ್ಯಕತೆಗಳಾದ ಆ್ಯಂಬುಲೆನ್ಸ್ ಮ್ಯಾನ್ ಪ್ರಾವೀಣ್ಯತಾ ಪದಕ ಮತ್ತು ಇತರ ಎರಡು ಪ್ರಾವೀಣ್ಯತಾ ಪದಕಗಳನ್ನು ಪಡೆಯುವ ಬಗ್ಗೆ ಹಾಗೂ ಮೂರು ರಾತ್ರಿ ತಂಗುವ ಶಿಬಿರವಾಸ, ರಾತ್ರಿ ಕಾಲದ ಹೊರಸಂಚಾರ, ಪ್ರದಾನ ಮಂತ್ರಿ ಪಾರಿತೋಷಕ ಸ್ಪರ್ಧೆಯ ಅಡಿಯಲ್ಲಿ ಮಾಡಿಸಬೇಕಾದ ಸಮಾಜ ಸೇವಾ ಶಿಬಿರ, ಸಮುದಾಯ ಯೋಜನೆ, ಲಾಗ್ ಬುಕ್ ರಚನೆ ಬಗ್ಗೆ, ಸಮರ್ಪಕ ಮಾರ್ಗದರ್ಶನ ನೀಡಲಾಯಿತು.

ದಿನಾಂಕ 24-04-2014 ರಂದು ಪೂರ್ವಾಹ್ನ ಸರ್ವಧರ್ಮ ಪ್ರಾರ್ಥನೆ ಸಂಘಟಿಸಲಾಯಿತು.

# ರಾಷ್ಟ್ರಪತಿ ಗೈಡ್ ಪೂರ್ವ ಸಿದ್ಧತಾ ಪರೀಕ್ಷಾ ಶಿಬಿರ

ದಿನಾಂಕ 25-04-2014 ರಿಂದ 29-04-2014 ರ ವರೆಗೆ ದೊಡ್ಡಬಳ್ಳಾಪುರದ ಡಾ. ಆನಿಬೆಸೆಂಟ್ ಪಾರ್ಕ್‌ನಲ್ಲಿ ಸ್ಕೌಟ್-ಗೈಡ್ ತರಬೇತಿ ಕಾಲದಲ್ಲಿ ರಾಜ್ಯಮಟ್ಟದ ರಾಷ್ಟ್ರಪತಿ ಗೈಡ್ ಪೂರ್ವಸಿದ್ಧತಾ ಪರೀಕ್ಷಾ ಶಿಬಿರ ನಡೆಯಿತು.

ವಿವಿಧ ಜಿಲ್ಲೆಗಳಿಂದ ಒಟ್ಟು 171 ಗೈಡ್ಸ್, 16 ಗೈಡರ್ಸ್ ಹಾಗೂ 12 ಸಂಪನ್ಮೂಲ ವ್ಯಕ್ತಿಗಳು ಈ ಶಿಬಿರದಲ್ಲಿ ಭಾಗವಹಿಸಿದ್ದರು.

ಗೈಡ್‌ಗಳನ್ನು 4 ಕಂಪೆನಿಗಳಾಗಿ ವಿಂಗಡಿಸಿ ನಾಯಕಿಯರನ್ನು ನಿಯೋಜಿಸಲಾಯಿತು.

ದಿನಾಂಕ 29-04-2014 ರಂದು ನಡೆದ ಸಮಾರೋಪ ಸಮಾರಂಭದಲ್ಲಿ ಶ್ರೀಮತಿ ಜಾನಕಿ ವೇಣುಗೋಪಾಲ್, ಎಸ್.ಓ.ಸಿ.,(ಗೈಡ್) ಇವರ ಉಪಸ್ಥಿತಿಯಲ್ಲಿ ಎಲ್ಲರಿಗೂ ಪ್ರಮಾಣ ಪತ್ರಗಳನ್ನು ವಿತರಿಸಲಾಯಿತು.

ಶ್ರೀಮತಿ ಜಾನಕಿ ವೇಣುಗೋಪಾಲ್ ಇವರ ಸಂಘಟನೆಯೊಂದಿಗೆ ಹಿರಿಯ ಅನುಭವಿ ಸಂಪನ್ಮೂಲ ವ್ಯಕ್ತಿಗಳಾದ ಶ್ರೀಮತಿ ಎಸ್.ಕೆ. ಪ್ರಭಾ ಶ್ರೀಮತಿ ಬಿ.ಡಿ. ಶಾಂತ ಹಾಗೂ ಶ್ರೀಮತಿ ಸುಶೀಲಾ ಚಂಗಪ್ಪ ಅವರ ಮಾರ್ಗದರ್ಶನದಲ್ಲಿ ಶಿಬಿರ ಯಶಸ್ವಿಯಾಯಿತು.

ಕೃಪೆ : ವಿಜಯವಾಣಿ ದಿ: 27-05-2014

## ನಿಮಗಿದು ಗೊತ್ತೇ? ಸ್ಕೌಟ್ಸ್ ಚಳವಳಿ

ಸ್ಕೌಟ್ಸ್ ಚಳವಳಿ 1903ರಲ್ಲಿ ಪ್ರಾರಂಭವಾಯಿತು. 'ಸ್ಕೌಟಿಂಗ್ ಫಾರ್ ಬಾಯ್ಸ್' ಎಂಬ ಪುಸ್ತಕ ಹೊರಬಂದ ನಂತರ ಈ ಚಳವಳಿ ಚುರುಕುಗೊಂಡಿತು. ಆಗ ಅಸ್ತಿತ್ವದಲ್ಲಿದ್ದ ಯುವಜನ ಸಂಸ್ಥೆಗಳಿಗೆ ಮಾರ್ಗದರ್ಶನ ತತ್ವಗಳನ್ನು ರೂಪಿಸುವ ಉದ್ದೇಶದಿಂದ, ಬ್ರಿಟಿಷ್ ಸೈನ್ಯದಲ್ಲಿದ್ದ ಲೆಫ್ಟಿನೆಂಟ್ ಕರ್ನಲ್ ಸರ್ ರಾಬರ್ಟ್ ಬ್ಯಾಡನ್ ಪೊವೆಲ್ ಈ ಪುಸ್ತಕವನ್ನು ಬರೆದರು. ಅವರ ಪುಸ್ತಕದ ಪ್ರಭಾವದಿಂದ ಅತಿ ಶೀಘ್ರದಲ್ಲೇ ಸ್ಕೌಟಿಂಗ್ ಚಳವಳಿ ಆರಂಭವಾಯಿತು. ಬ್ಯಾಡನ್ ಪೊವೆಲ್, ಬ್ರೌನ್ ಸೀ ದ್ವೀಪದಲ್ಲಿ ಪ್ರಾಯೋಗಿಕವಾಗಿ ಸ್ಕೌಟ್ ಶಿಬಿರವನ್ನು ನಡೆಸಿ ತಮ್ಮ ವಿಚಾರಗಳನ್ನು ಕಾರ್ಯರೂಪಕ್ಕಿಳಿಸಿದರು. ಒಬ್ಬ ಬಾಲಕ 11ರಿಂದ 16 ವರ್ಷದವರೆಗೆ ವಯಸ್ಸಿನವರಿಗೆ, ಯಾವ ಸಮಯದಲ್ಲಿ ಸ್ಕೌಟ್ ಟ್ರೂಪ್‌ಗೆ ಸೇರಿದರೂ ಅವನು ಸ್ಕೌಟ್ ಆಗುತ್ತಾನೆ. ದೇವರಿಗೆ ಮತ್ತು ದೇಶಕ್ಕೆ ತಾನು ಮಾಡಬೇಕಾಗಿರುವ ಕೆಲಸಗಳನ್ನು ನಿರ್ವಹಿಸುವುದಾಗಿ ಯಾವಾಗಲೂ ಇತರ ಜನರಿಗೆ ಸಹಾಯ ಮಾಡಲು ಸಿದ್ಧವಿರುವುದಾಗಿ ಮತ್ತು ಸ್ಕೌಟ್ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸುವುದಾಗಿ ಬಾಲಕ ಪ್ರತಿಜ್ಞೆ ಮಾಡಬೇಕು. ಅನಂತರವೇ ಆ ಬಾಲಕನನ್ನು ಸ್ಕೌಟ್ ಆಗಿ ಅಂಗೀಕರಿಸಲಾಗುತ್ತದೆ. ಸ್ಕೌಟ್ ನಿಯಮಗಳು ಹೀಗಿವೆ: 1. ಸ್ಕೌಟ್‌ನಲ್ಲಿ ನಂಬಿಕೆ ಇಟ್ಟಿರಬೇಕು. 2. ಸ್ಕೌಟ್ ನಿಷ್ಠನಾಗಿರಬೇಕು. 3. ಸ್ಕೌಟ್ ಸ್ನೇಹಮಯಿಯಾಗಿರಬೇಕು ಮತ್ತು ಬೇರೆಯವರಲ್ಲಿ ಸಹಾನುಭೂತಿ ಹೊಂದಿರಬೇಕು. 4. ಸ್ಕೌಟ್ ಇತರ ಎಲ್ಲ ಸ್ಕೌಟ್‌ಗಳಿಗೆ ಸೋದರನಾಗಿರಬೇಕು. 5. ಸ್ಕೌಟ್ ಎಂತಹ ಕಷ್ಟದ ಪರಿಸ್ಥಿತಿಯಲ್ಲೂ ಧೈರ್ಯಶಾಲಿಯಾಗಿರಬೇಕು. 6. ಸ್ಕೌಟ್ ತನ್ನ ಸಮಯವನ್ನು ಸದುಪಯೋಗಿಸಿಕೊಳ್ಳಬೇಕು ಮತ್ತು ಇತರರ ವಸ್ತುಗಳು ಮತ್ತು ಸ್ವತ್ತುಗಳು ಹಾಳಾಗದಂತೆ ನೋಡಿಕೊಳ್ಳಬೇಕು. 7. ಸ್ಕೌಟ್ ತನ್ನಲ್ಲೂ ಮತ್ತು ಇತರರಲ್ಲೂ ಗೌರವ ಇಟ್ಟಿರಬೇಕು. ಸ್ಕೌಟಿಂಗ್‌ನಲ್ಲಿ ಪ್ರಾಥಮಿಕ ಘಟಕವನ್ನು 'ಪೆಟ್ರೋಲ್' ಎಂದು ಕರೆಯುವರು. ಸ್ಕೌಟ್‌ಗಳ ಎಲ್ಲ ಕಾರ್ಯಕಲಾಪಗಳು ಈ ಪೆಟ್ರೋಲ್‌ನ ಮೇಲೆ ಆಧಾರಿತವಾಗಿರುತ್ತವೆ. ಪೆಟ್ರೋಲ್ ನಾಯಕ ಎಲ್ಲ ಕಾರ್ಯಕಲಾಪಗಳನ್ನು ಯೋಚಿಸುತ್ತಾನೆ ಮತ್ತು ಆ ಕಾರ್ಯಕಲಾಪಗಳನ್ನು ನಿರ್ವಹಿಸುತ್ತಾನೆ. ಅಂದಮಾತ್ರಕ್ಕೆ ಪ್ರತಿಯೊಂದು ಪೆಟ್ರೋಲ್ ತನ್ನ ಕೆಲಸವನ್ನು ತಾನೇ ಸ್ವತಂತ್ರವಾಗಿ ಮಾಡುತ್ತದೆ ಎಂದರ್ಥವಲ್ಲ. ಎಲ್ಲ ಪೆಟ್ರೋಲ್‌ಗಳು ನಿಯಮಿತವಾಗಿ ಸಭೆ ಸೇರುತ್ತವೆ. ಅವು ಒಟ್ಟಿಗೆ ಸೇರಿ ಕೆಲಸಕಾರ್ಯಗಳನ್ನು ಕುರಿತು ಚರ್ಚಿಸುತ್ತವೆ. ವಿವಿಧ ಪೆಟ್ರೋಲ್‌ಗಳಿಗೆ ಸೇರಿದ ಸ್ಕೌಟ್‌ಗಳು ನಿರ್ದಿಷ್ಟ 'ಪ್ರೊಫಿಷಿಯನ್ಸಿ ಬ್ಯಾಡ್ಜ್'ಗಾಗಿ ಕೆಲಸ ಮಾಡುತ್ತಾರೆ. ಆದ್ದರಿಂದ ಅವರೆಲ್ಲ ಒಂದು ಸಾಮಾನ್ಯ ಧ್ಯೇಯಕ್ಕೆ ಕಾರ್ಯ ನಿರ್ವಹಿಸುತ್ತಾರೆ.

# ರಾಷ್ಟ್ರ ಮಟ್ಟದ "ಸಂಧಾನ್" 2014

ದಿನಾಂಕ 7.5.2014 ರಿಂದ 11.5.2014ರ ವರೆಗೆ ರಾಷ್ಟ್ರೀಯ ತರಬೇತಿ ಕೇಂದ್ರ ಪಚ್ಚಮರಿ ಮಧಪ್ರದೇಶದಲ್ಲಿ ರಾಷ್ಟ್ರ ಮಟ್ಟದ ಸಂಧಾನ್ 2014ರ ಕಾರ್ಯಕ್ರಮದಲ್ಲಿ ಕರ್ನಾಟಕದಿಂದ ಶ್ರೀಮತಿ ಎಸ್.ಕೆ. ಪ್ರಭಾ, ಎಲ್.ಟಿ(ಗೈಡ್ಸ್), ಶ್ರೀಮತಿ ಬಿ. ರೇವತಿ, ಎಲ್.ಟಿ(ಬುಲ್‌ಬುಲ್), ಶ್ರೀ. ಟಿ.ಎ. ಮಂಜುನಾಥಾಚಾರ್, ಎಲ್.ಟಿ(ಸ್ಕೌಟ್ಸ್), ಶ್ರೀಮತಿ ಸಿ. ಮಂಜುಳ, ಎಲ್.ಟಿ(ಗೈಡ್ಸ್) ಶ್ರೀ ಆನಂದ ಅಡಿಗ, ಎಲ್.ಟಿ(ಸ್ಕೌಟ್) ಮತ್ತು ಶ್ರೀ. ಎ.ಎಂ. ಶಂಕರ್, ಎಲ್.ಟಿ(ರೋವರ್) ಇವರುಗಳು ಭಾಗವಹಿಸಿದ್ದರು.

ಶ್ರೀ. ಜಿ. ರಂಗರಾವ್, ಮಾಜಿ ನಿರ್ದೇಶಕರು ಇವರ ಅಧ್ಯಕ್ಷತೆಯಲ್ಲಿ ಶ್ರೀ. ಫನಾತೆ, Ex-DDSLT ಮತ್ತು ಶ್ರೀ ಕೆ.ಬಿ.ಸಿ. ನಾಯರ್ Ex- Director ಇವರ ಮಾರ್ಗದರ್ಶನದಲ್ಲಿ ಸಂಧಾನ್ ಕಾರ್ಯಕ್ರಮವು ಜರುಗಿತು.

ಬಾಲಕರ ಮತ್ತು ಬಾಲಕಿಯರ ಕಾರ್ಯಕ್ರಮ, ವಯಸ್ಕ ನಾಯಕ ನಾಯಕಿಯರ ತರಬೇತಿ ಶಿಬಿರಗಳ ಬಗ್ಗೆ ಪ್ರಸಕ್ತ ಬದಲಾವಣೆಗಳು ಮಕ್ಕಳ ಆಸಕ್ತಿಗಳಿಗೆ ಅನುಗುಣವಾಗಿ ಶಿಕ್ಷಕ/ಶಿಕ್ಷಕಿಯರಿಗೆ ಅನುಕೂಲವಾಗುವಂತೆ ವಿಭಾಗದ ಮಟ್ಟದಲ್ಲಿ ಚರ್ಚಿಸಿ ವಿವಿಧ ತೀರ್ಮಾನಗಳನ್ನು ಪೂರ್ಣಗೊಳಿಸಿ ತಜ್ಞರ ತಂಡದ ಶಿಫಾರಸ್ಸಿನ ವರದಿಯನ್ನ ರಾಷ್ಟ್ರೀಯ ಆಯುಕ್ತರಿಗೆ ಸಲ್ಲಿಸಲಾಯಿತು.

ದಿನಾಂಕ 9.5.2014 ರಂದು ರಾಷ್ಟ್ರೀಯ ಸಾಹಸ ಸಂಸ್ಥೆಯ 22ನೇ ವರ್ಷಾಚರಣೆಯಲ್ಲಿ ಭಾಗವಹಿಸಿ, ಅವರ ಆತಿಥ್ಯವನ್ನು ಸ್ವೀಕರಿಸಲಾಯಿತು.

ರಾಷ್ಟ್ರೀಯ ಆಯುಕ್ತರಾದ ಡಾ॥ ಶ್ರೀ. ಬಿ.ಐ. ನಗರಾಳೆ ಇವರು ನಮ್ಮೊಂದಿಗೆ ಚರ್ಚೆಯಲ್ಲಿ ಭಾಗವಹಿಸಿ ನಮ್ಮನ್ನು ಉತ್ತಾಹಿಸುತ್ತಿದ್ದರು. ಪ್ರತಿ ದಿನ ನಾವು ಮಾಡುವ ಕೆಲಸ ಕಾರ್ಯಗಳಯ ಮಾರ್ಗದರ್ಶನ ನೀಡುತ್ತಾ ಪ್ರೊತ್ಸಾಹಿಸಿತ್ತಿದ್ದರು.

ದಿನಾಂಕ 10.5.2014 ರಂದು ಕುಮಾರಿ ಕೃಪಾ ವಿಜೈ, ಎಎಲ್‌ಟಿ(ಗೈ), ಬೆಂಗಳೂರು ಉತ್ತರ ಜಿಲ್ಲೆ ಇವರು ರಾಷ್ಟ್ರೀಯ ತರಬೇತಿ ಕೇಂದ್ರ ಪಚ್ಚಮರಿಗೆ ಕೊಡುಗೆಯಾಗಿ ನೀಡಿದ್ದ ಲಾರ್ಡ್ ಮತ್ತು ಲೇಡಿ ಬಿ.ಪಿ.ಯವರ ವಿವಾಹದ ಭಾವ ಚಿತ್ರವನ್ನು ಶಿಲಾಪಲಕದಲ್ಲಿ ಮೂಡಿಸಿ ಕ್ವೀನ್ಸ್ ಪಾರ್ಕ್‌ನಲ್ಲಿ ಸ್ಥಾಪಿಸಲಾಯಿತು. ಇದನ್ನು ರಾಷ್ಟ್ರೀಯ ಆಯುಕ್ತರಾದ ಡಾ॥ ಬಿ.ಐ. ನಗರಾಳೆ ಅವರಿಂದ ಉದ್ಘಾಟಿಸಲಾಯಿತು.

ದಿನಾಂಕ 10.5.2014 ರಂದು ರಾಷ್ಟ್ರೀಯ ಆಯುಕ್ತರ ಕರೆಯ ಮೇರೆಗೆ ರಾಷ್ಟ್ರಾದ್ಯಂತ ಸುಮಾರು 50ಕ್ಕು ಹೆಚ್ಚು ತರಬೇತುದಾರರಿಗೆ ಸನ್ಮಾನ ಕಾರ್ಯಕ್ರಮವನ್ನು ರಾಷ್ಟ್ರೀಯ ತರಬೇತಿ ಕೇಂದ್ರ ಪಚ್ಚಮಡಿಯಲ್ಲಿ ಆಯೋಜಿಸಿದ್ದರು.

ಕರ್ನಾಟಕದ ವತಿಯಿಂದ ಶ್ರಿ. ಎಂ.ಎಂ. ಲೋಂಡೆ, ಎಲ್.ಟಿ(ಸ್ಕೌಟ್) ಶ್ರೀಮತಿ ಜೂಲಿಯಾನ ಲಸ್ರಡೋ, ಎಲ್.ಟಿ(ಕಬ್), ಶ್ರೀಮತಿ ಸಿ.ಎ. ಮೀನಾಕ್ಷಿ, ಎಲ್.ಟಿ(ಬುಲ್‌ಬುಲ್), ಶ್ರೀಮತಿ ಎಸ್.ಕೆ. ಪ್ರಭಾ, ಎಲ್.ಟಿ(ಗೈಡ್), ಶ್ರೀಮತಿ. ಪ್ರೇಮ ಸಿ. ಮಂಗಳೂರು, ಎಲ್.ಟಿ(ಗೈಡ್), ಶ್ರೀಮತಿ ಎನ್.ಕೆ. ಛಾಯ, ಎಲ್.ಟಿ(ಗೈಡ್) ಶ್ರೀಮತಿ ಬಿ.ಡಿ. ಶಾಂತ, ಎಲ್.ಟಿ(ಗೈಡ್) ಇವರುಗಳು ಭಾಗವಹಿಸಿದ್ದರು.

ಇದೇ ಸಮಾರಂಭದಲ್ಲಿ ಶ್ರೀಮತಿ ಸಿ. ಮಂಜುಳ, ಎಲ್.ಟಿ(ಗೈಡ್) ಪ್ರಭಾರಿ ರಾಜ್ಯ ತರಬೇತಿ ಆಯುಕ್ತರು ಇವರಿಗೆ ಎಲ್.ಟಿ(ಗೈಡ್) ಪ್ರಮಾಣ ಪತ್ರವನ್ನು ರಾಷ್ಟ್ರೀಯ ಆಯುಕ್ತರು ಶ್ರೀ ಬಿ.ಐ. ನಗರಾಳೆ ನೀಡಿ ಅಭಿನಂದಿಸಿದರು. ಪಿನ್ ಅನ್ನು ಶ್ರೀಮತಿ ವಿಜಯಲಕ್ಷ್ಮಿ, ಮುಖ್ಯ ಗೈಡ್ ಆಯುಕ್ತರು, ರಾಷ್ಟ್ರ ಸಂಸ್ಥೆ ಇವರು ನೀಡಿದರು. ಸಮಾರಂಭದಲ್ಲಿ ರಾಷ್ಟ್ರೀಯ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಎನ್.ಎ. ಖಾನ್ ಹಾಗೂ ಸ್ಕೌಟ್ ವಿಭಾಗದ ಅಂತರಾಷ್ಟ್ರೀಯ ಆಯುಕ್ತರಾದ ಶ್ರೀ ಎಂ.ಎ. ಖಾಲಿದ್ ಅವರುಗಳು ಉಪಸ್ಥಿತರಿದ್ದರು.

ಸಂಖ್ಯೆ: ಬಿಎಸ್‌ಜಿ/ಎಸ್‌ಹೆಚ್‌ಕ್ಯೂ/ 277/ 2014–15 ದಿನಾಂಕ: 27.05.2014

**ರಾಜ್ಯದ ಎಲ್ಲಾ ಜಿಲ್ಲಾ ಕಾರ್ಯದರ್ಶಿಗಳಿಗೆ**
**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್**
ಜಿಲ್ಲಾ ಸಂಸ್ಥೆ, ಕರ್ನಾಟಕ

ಮಾನ್ಯರೆ,

ವಿಷಯ:–ಜೂನ್–05 ರಂದು ವಿಶ್ವ ಪರಿಸರ ದಿನಾಚರಣೆಯನ್ನು ಆಚರಿಸುವ ಕುರಿತು.

ತಮಗೆ ತಿಳಿದಿರುವಂತೆ, ನಾವುಗಳು ಸ್ಥಳೀಯ ಮಟ್ಟದಲ್ಲಿ, ಜಿಲ್ಲೆಗಳಲ್ಲಿ ಹಾಗು ರಾಜ್ಯ ಮಟ್ಟದಲ್ಲಿ ಪ್ರತಿವರ್ಷ ಜೂನ್ 5 ರಂದು ಪರಿಸರ ಜಾಗೃತಿ ಕಾರ್ಯಕ್ರಮವನ್ನು ಏರ್ಪಡಿಸಿ **ವಿಶ್ವ ಪರಿಸರ ದಿನಾಚರಣೆಯನ್ನು** ಆಚರಿಸಲಾಗುತ್ತಿದೆ. ಹೆಚ್ಚು ಸ್ಕೌಟ್ಸ್ / ಗೈಡ್ಸ್/ ರೋವರ್ಸ್ / ರೇಂಜರ್ಸ್‌ಗಳನ್ನು ಕಾರ್ಯಕ್ರಮದಲ್ಲಿ ತೊಡಗಿಸಿಕೊಂಡು ಸಾರ್ವಜನಿಕರಿಗೆ ಪರಿಸರ ಸಂರಕ್ಷಣೆ ಬಗ್ಗೆ ಜಾಗೃತಿ ಮೂಡಿಸುವ ಪ್ರಯತ್ನ ನಡೆಸಲಾಗುತ್ತಿದೆ. ದಿನಾಂಕ 5 ಜೂನ್ 2014ರಂದು ಜರುಗುವ ಸಮಾರಂಭದಲ್ಲಿ ಕೆಳಕಂಡ ಕಾರ್ಯಕ್ರಮವನ್ನು ಸ್ಥಳೀಯ ಹಾಗು ಜಿಲ್ಲಾ ಸಂಸ್ಥೆಗಳ ಮಟ್ಟದಲ್ಲಿ ಏರ್ಪಡಿಸಲು ಕೋರಿದೆ.

1) ನಗರದ ಪ್ರಮುಖ ಬೀದಿಗಳಲ್ಲಿ ಸ್ಕೌಟ್ಸ್–ಗೈಡ್ಸ್/ ರೋವರ್ಸ್–ರೇಂಜರ್ಸ್‌ಗಳಿಂದ ಪಥಚಲನ ಏರ್ಪಡಿಸಬೇಕು.
2) ಶಾಲೆ–ಕಾಲೇಜು ಹಾಗು ಮನೆಯಂಗಳದಲ್ಲಿ ಸಸಿನೆಡುವ ಕಾರ್ಯಕ್ರಮ ಏರ್ಪಡಿಸಬೇಕು.
3) ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಬೇಕು.

ವಿಷಯ: ನೆರೆಹೊರೆಯವರ ಸಹಕಾರದಿಂದ ಸ್ಕೌಟ್ಸ್–ಗೈಡ್ಸ್‌ಗಳು / ರೋವರ್ಸ್– ರೇಂಜರ್ಸ್‌ಗಳು ಪರಿಸರ ಸಂರಕ್ಷಣೆ ಮತ್ತು ನಿರ್ವಹಣೆ ಮಾಡುವಲ್ಲಿ ವಹಿಸಬೇಕಾದ ಪಾತ್ರದ ಬಗ್ಗೆ.

4) ಪರಿಸರವನ್ನು ಉಳಿಸಲು ಹಾಗು ಸಂರಕ್ಷಿಸುವ ಕುರಿತು ಡ್ರಾಯಿಂಗ್ ಮತ್ತು ಪೈಂಟಿಂಗ್ ಕಾರ್ಯಕ್ರಮವನ್ನು ಏರ್ಪಡಿಸುವುದು.

ಮೇಲ್ಕಂಡ ವಿಶ್ವಪರಿಸರ ದಿನಾಚರಣೆ ಕಾರ್ಯಕ್ರಮಗಳಿಗೆ, **ಸಾರ್ವಜನಿಕ ಶಿಕ್ಷಣ ಇಲಾಖೆ, ತಾಲ್ಲೂಕ್ ಪಂಚಾಯತ್, ಜಿಲ್ಲಾ ಪಂಚಾಯತ್‌ಗಳ, ಸ್ಥಳೀಯ / ಜಿಲ್ಲಾ ಮಟ್ಟದ ಅಧಿಕಾರಿಗಳನ್ನು ಸಂಪರ್ಕಿಸಿ,** ಅವರುಗಳ ಸಹಾಯ–ಸಹಕಾರ–ನೆರವನ್ನು ಕೋರಿ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಏರ್ಪಡಿಸಲು ಕೋರಿದೆ.

ಕಾರ್ಯಕ್ರಮದ ನಂತರ ವರದಿ ಮತ್ತು ಫೋಟೋಗಳನ್ನು ರಾಜ್ಯ ಸಂಸ್ಥೆಗೆ ಕಳುಹಿಸಿಕೊಡಲು ಸೂಚಿಸಿದೆ.

ಸ್ಕೌಟ್/ಗೈಡ್ಸ್ ವಂದನೆಗಳೊಂದಿಗೆ,

"ಪ್ರತಿ"

ಸಹಿ/–
ರಾಜ್ಯ ಕಾರ್ಯದರ್ಶಿ

# ಜಿಲ್ಲಾ ವಾರ್ತೆಗಳು................

## ಉಡುಪಿ

ದಿನಾಂಕ 11-04-2014 ರಿಂದ 13-04-2014 ರ ವರೆಗೆ ತೃತೀಯ ಸೋಪಾನ್, ರಾಜ್ಯ ಪುರಸ್ಕಾರ್, ಹಾಗೂ ರಾಷ್ಟ್ರಪತಿ ಪೂರ್ವಸಿದ್ಧತಾ ಪರೀಕ್ಷಾ ಶಿಬಿರವು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಡಾ। ವಿ.ಎಸ್. ಆಚಾರ್ಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ ಪ್ರಗತಿನಗರ ಇಲ್ಲಿ ನಡೆಯಿತು.

ಜಿಲ್ಲೆಯ 17 ವಿವಿಧ ಶಾಲೆಗಳಿಂದ 149 ಸ್ಕೌಟ್ಸ್-ಗೈಡ್ಸ್‌ಗಳು ಮತ್ತು 15 ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್‌ಗಳು ಭಾಗವಹಿಸಿದ್ದರು. ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಬಿ. ಆನಂದ ಅಡಿಗ, ಸ್ಥಾನೀಯ ಆಯುಕ್ತರು, ಶ್ರೀ ವಿ.ಜಿ. ಬೈಕಾಡಿ, ಶ್ರೀಮತಿ ಸುಮನ ಶೇಖರ್ ಇವರು ಭಾಗವಹಿಸಿದ್ದರು.

ಶಿಬಿರದ ಕೊನೆಯ ದಿನದಂದು ಶ್ರೀಮತಿ ಶಾಂತಾ ವಿ. ಆಚಾರ್ಯ, ರಾಜ್ಯ ಆಯುಕ್ತೆ(ಗೈಡ್) ಶ್ರೀ ಕೆ.ಬಿ. ರಾವ್, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಆಯುಕ್ತರು(ಸ್ಕೌಟ್) ಶ್ರೀಮತಿ ರಾಜಲಕ್ಷ್ಮೀ ಡಿ. ಶೆಟ್ಟಿ, ಜಿಲ್ಲಾ ಆಯುಕ್ತರು (ಗೈಡ್) ಶ್ರೀ ರಾಜ್‌ಗೋಪಾಲ್ ಆಚಾರ್ಯ ಎ.ಎಲ್.ಟಿ. (ಕಬ್) ಶ್ರೀ ಶೇಖರ್ ಪೂಜಾರಿ, ಜಿಲ್ಲಾ ಕಾರ್ಯದರ್ಶಿ ಶಿಬಿರಕ್ಕೆ ಭೇಟಿ ನೀಡಿ ಸ್ಕೌಟ್ಸ್ ಗೈಡ್ಸ್ ವಿದ್ಯಾರ್ಥಿಗಳಿಗೆ ಶುಭ ಹಾರೈಸಿದರು. ಜಿಲ್ಲಾ ಸಂಘಟಕ ಶ್ರೀ ನಿತಿನ್ ಅಮಿನ್ ಕಾರ್ಯಕ್ರಮ ಸಂಘಟಿಸಿದರು.

## ಹಾವೇರಿ

ದಿನಾಂಕ 25-04-2014 ರಿಂದ 27-04-2014 ರ ವರೆಗೆ ರಾಜ್ಯ ಪುರಸ್ಕಾರ ಪೂರ್ವ ಸಿದ್ಧತಾ ಶಿಬಿರವು ಭಾರತ್ ಸ್ಕೌಟ್ಸ್ - ಗೈಡ್ಸ್ ಜಿಲ್ಲಾ ಸಂಸ್ಥೆ ಕಾರ್ಯಾಲಯ ಎಂ.ಪಿಎಸ್. ನಂ.-2 ಹಾವೇರಿಯಲ್ಲಿ ಜರುಗಿತು. ಶಿಬಿರದಲ್ಲಿ 114 ಸ್ಕೌಟ್ಸ್ ಮತ್ತು 87 ಗೈಡ್ಸ್ ಭಾಗವಹಿಸಿದ್ದರು. ಶ್ರೀ ಎಂ. ಆರ್. ಪಾಟೀಲ್, ಡಿ.ಟಿ.ಸಿ.(ಎಸ್) ಶ್ರೀ ಎ.ಎಲ್ ಶೇಖಸೂರಣಗಿ, ಡಿ.ಓ.ಸಿ.(ಎಸ್.), ಶ್ರೀಮತಿ ಉಮಾ ಮರಿಗೆಂಚಮ್ಮನವರ ಡಿ.ಟಿ.ಸಿ.(ಜಿ) ಮತ್ತು ಕುಮಾರಿ ಶೃತಿ ದಾನರೆಡ್ಡಿ, ಡಿ.ಓ. ರವರು ಸಂಪನ್ಮೂಲ ವ್ಯಕ್ತಿಗಳಾಗಿ ಕಾರ್ಯನಿರ್ವಹಿಸಿದ್ದರು. ತಾಲ್ಲೂಕು ಕಾರ್ಯದರ್ಶಿಗಳು, ಸ್ಕೌಟ್ ಮಾಸ್ಟರ್ ಗೈಡ್ ಕ್ಯಾಪ್ಟನ್ನರು ಭಾಗವಹಿಸಿ ಕಾರ್ಯಕ್ರಮ ಯಶಸ್ವಿ ಗೊಳಿಸಿದರು.

## ಹಾಸನ

ದಿನಾಂಕ 14-04-2014 ರಂದು ಅರಸೀಕೆರೆ ತಾಲ್ಲೂಕಿನ ಬಾಗೇಶಪುರದ ಸ.ಹಿ.ಪ್ರಾ. ಶಾಲೆಯಲ್ಲಿ ಅಂಬೇಡ್ಕರ್ ಜಯಂತಿ ಕಾರ್ಯಕ್ರಮದಂದು ಬೇಸಿಗೆಯ ರಜೆ ಕಾಲದ ಸದುಪಯೋಗ ಪಡಿಸುವ ಉದ್ದೇಶದಿಂದ ಶ್ರಮದಾನ ಸ್ವಚ್ಛತಾ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಒಟ್ಟು 30 ಸ್ಕೌಟ್ಸ್ ಭಾಗವಹಿಸಿ ಶಾಲೆಗೆ ಸಂಬಂಧಿಸಿದ ವಿವಿಧ ಕೆಲಸಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿದರು.

*********

ದಿನಾಂಕ 05-05-2014 ರಂದು ಹಾಸನ ಜಿಲ್ಲೆ, ಚನ್ನರಾಯಪಟ್ಟಣ ತಾಲ್ಲೂಕು, ಶ್ರೀ ಆದಿಚುಂಚನಗಿರಿ ಪ್ರಥಮ ದರ್ಜೆ ಕಾಲೇಜಿನ ವತಿಯಿಂದ "Messengers of peace" Karnataka Startup and Networking ಎಂಬ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಹೆಚ್.ಎ. ಗೌಡಯ್ಯ, ಜಿಲ್ಲಾ ಸಹಾಯಕ ಆಯುಕ್ತರು ವಹಿಸಿದ್ದರು. ಶ್ರೀ ಕೆ.ಎಸ್. ದೇವರಾಜು ಪ್ರಾಂಶುಪಾಲರು, ಎಸ್.ಎ.ಎಫ್.ಜಿ. ಕಾಲೇಜು, ಶ್ರೀ ಎನ್. ಜಯರಾಮ್ ಆಡಳಿತಾಧಿಕಾರಿ ಮತ್ತು ಶ್ರೀ ಜಯರಾಮ್, ಪತ್ರಕರ್ತರು ಮತ್ತು ತಾಲ್ಲೂಕು ಸಂಸ್ಥೆ ಖಜಾಂಚಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಈ ಕಾರ್ಯಕ್ರಮವನ್ನು ಕಿರಣ್ ವಿ. ಮತ್ತು ವಿನಾಯಕ ಎ.ವಿ. ಎಂಬ ರೋವರ್ಸ್‌ಗಳು ನಡೆಸಿದರು. ಇದರಲ್ಲಿ 5 ಶಾಲಾ/ಕಾಲೇಜಿನ ಕಬ್ಸ್, ಸ್ಕೌಟ್ಸ್ /ಗೈಡ್ಸ್ ಹಾಗೂ ರೋವರ್ಸ್/ರೇಂಜರ್ಸ್‌ಗಳು ಭಾಗವಹಿಸಿದ್ದರು.

## ಮೈಸೂರು

ದಿನಾಂಕ 28-04-2014 ರಂದು ಮೈಸೂರಿನ ಡಿ. ಬನುಮಯ್ಯ ವಾಣಿಜ್ಯ ಮತ್ತು ಕಲಾ ಕಾಲೇಜಿನಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರೇಂಜರ್ಸ್ ಮತ್ತು ರೋವರ್ ಘಟಕಗಳ ಉದ್ಘಾಟನೆಯಾಯಿತು. ಡಾ. ಕಮಲ ರಾಮನ್ ಜಿಲ್ಲಾ ಅಯುಕ್ತರು (ಗೈಡ್ಸ್) ಹಾಗೂ ಅಧ್ಯಕ್ಷರು ರೆಡ್‌ಕ್ರಾಸ್ ಸಂಸ್ಥೆ ಮೈಸೂರು ಇವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಕಾರ್ಯಕ್ರಮದ ಮುಖ್ಯ ಅತಿಥಿಗಳಾಗಿ ಡಾ. ಕೆ.ಬಿ. ಗುರುಮೂರ್ತಿ, ಜಿಲ್ಲಾ ಕಾರ್ಯದರ್ಶಿಗಳು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮೈಸೂರು ಇವರು ಆಗಮಿಸಿದ್ದರು.

ಶ್ರೀಮತಿ ಎಂ.ಎಲ್. ನಳಿನಿ, ರೇಂಜರ್ಸ್ ಲೀಡರ್, ಕಾರ್ಯಕ್ರದ ಪ್ರಾಸ್ತಾವಿಕ ನುಡಿಗಳೊಂದಿಗೆ ಎಲ್ಲರನ್ನೂ ಸ್ವಾಗತಿಸಿದರು. ಕಾಲೇಜಿನ ರೆಂಜರ್ ಕು. ಬೇಬಿಕುಮಾರಿ ಅತಿಥಿಗಳ ಪರಿಚಯವನ್ನು ಮಾಡಿಕೊಟ್ಟರು.

ಡಾ. ಕಮಲ ರಾಮನ್ ಮತ್ತು ಡಾ. ಕೆ.ಬಿ. ಗುರುಮೂರ್ತಿ ಸ್ಕೌಟ್ಸ್ ಮತ್ತು ಗೈಡ್ಸ್‌ನ ಚಟುವಟಿಕೆಗಳ ಬಗ್ಗೆ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದರು. ಶ್ರೀಯುತ ರಾಮ್ ಪ್ರಸಾದ್, ಜಿಲ್ಲಾ ಸಂಘಟನಾ ಆಯುಕ್ತರು ಮತ್ತು ಶ್ರೀಯುತ ಶಶಿಧರ್ ಸ್ಕೌಟ್ಸ್ ಮಾಸ್ಟರ್ ಇವರುಗಳು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಡಿ. ಬನುಮಯ್ಯ ವಿದ್ಯಾ ಸಂಸ್ಥೆಯ ಅಧ್ಯಕ್ಷರಾದ ಡಾ. ವಿ.ಬಿ. ಜಯದೇವ ಅವರು ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದರು. ಮತ್ತು ಆತಳಿತಾಧಿಕಾರಿಗಳಾದ ಡಾ. ಎನ್. ತಿಮ್ಮಯ್ಯ ಅವರು ಉಪಸ್ಥಿತರಿದ್ದರು.

ಶ್ರೀ ಆರ್. ಚಂದ್ರು ಕನ್ನಡ ಉಪನ್ಯಾಸಕರು ಕಾರ್ಯಕ್ರಮವನ್ನು ನಿರೂಪಿಸಿದರು. ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಬಿ.ಎಸ್. ಮಂಜುನಾಥ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

## ಕೊಪ್ಪಳ

ದಿನಾಂಕ 13-04-2014 ರಂದು ಮಹಾವೀರ ಜಯಂತಿಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಆಚರಿಸಲಾಯಿತು. ನಂತರ, ಜೈನ ದೇವಾಲಯದಲ್ಲಿ ನಡೆದ ಕಾರ್ಯಕ್ರಮದಲ್ಲಿ ಸೇವೆಯನ್ನು ಮಾಡಲಾಯಿತು. ಇದರಲ್ಲಿ ಸ್ಕೌಟ್ ಮಾಸ್ಟರ್‌ಗಳು ಹಾಗೂ ಎ.ಎಸ್.ಓ.ಸಿ., ಶ್ರೀ ಎ.ಎಸ್.ಶಿವುಕುಮಾರ ಭಾಗವಹಿಸಿದ್ದರು.

*********

ದಿನಾಂಕ 14-04-2014 ರಂದು ಅಂಬೇಡ್ಕರ್ ಜಯಂತಿಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಆಚರಸಿಲಾಯಿತು. ಶ್ರೀ ಉಮೇಶ ಪೂಜಾರ, ಬಿ.ಇ.ಓ., ರವರು ಅಂಬೇಡ್ಕರ್ ಭಾವಚಿತ್ರಕ್ಕೆ ಪೂಜೆಯನ್ನ ನೆರವೇರಿಸಿ ಮಾತನಾಡುತ್ತ ಅಂಬೇಡ್ಕರ್ ರವರು ನಡೆದು ಬಂದ ಜೀವನದ ಹಾದಿಯನ್ನು ವಿವರಿಸಿದರು. ಇದರಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಿಬ್ಬಂದಿಗಳು ಹಾಗು ಶ್ರೀ ಎಸ್.ಎನ್. ಪಾಟೀಲ ಸ್ಥಳೀಯ ಸಂಸ್ಥೆ ಕೊಪ್ಪಳ ಖಜಾಂಚಿಗಳು ಹಾಗೂ ಎ.ಎಸ್.ಓ.ಸಿ., ಶ್ರೀ ಎಸ್. ಶಿವುಕುಮಾರ್ ಭಾಗವಹಿಸಿದ್ದರು.

**********

ದಿನಾಂಕ 01-05-2014 ರಂದು ಜಿಲ್ಲಾಡಳಿತ ಏರ್ಪಡಿಸಿದ್ದ ಕಾರ್ಮಿಕ ದಿನಾಚರಣೆಯ ಮೆರವಣಿಗೆಯಲ್ಲಿ ಭಾಗವಹಿಸಲಾಯಿತು.

************

ದಿನಾಮಕ 02-05-2014 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಬಸವ ಜಯಂತಿಯನ್ನು ಆಚರಿಸಲಾಯಿತು. ನಂತರ ಜಿಲ್ಲಾಡಳಿತ ಏರ್ಪಡಿಸಿದ್ದ ಮೆರವಣಿಗೆಯಲ್ಲಿ ಭಾಗವಹಿಸಲಾಯಿತು

**********

ದಿನಾಂಕ 09-05-2014 ರಂದು ನ್ಯೂ ಆಕ್ಸ್‌ಫರ್ಡ್ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ಹೊರಸಂಚಾರ ನಡೆಸಲಾಯಿತು. ಇದರಲ್ಲಿ 20 ಸ್ಕೌಟ್ಸ್ ಮತ್ತು 10 ಗೈಡ್ಸ್‌ಗಳು, ಸ್ಕೌಟ್ ಮಾಸ್ಟರ್ ಶ್ರೀ ಕೃಷ್ಣಮೂರ್ತಿ, ಶ್ರೀ ಶಿವ ಬಸವನಗೌಡ ಪಾಟೀಲ ಸ್ಥಳೀಯ ಸಂಸ್ಥೆ ಖಜಾಂಚಿಗಳು ಭಾಗವಹಿಸಿದ್ದರು.

***********

ದಿನಾಂಕ : 15-05-2014 ರಂದು ಸರಕಾರಿ ಪದವಿ ಪೂರ್ವ ಕಾಲೇಜಿನ ಸ್ಕೌಟ್ಸ್‌ಗಳಿಂದ ಗುಡ್ಡ ಹತ್ತುವ ಶಿಬಿರವನ್ನು ನಡೆಸಲಾಯಿತು. ಈ ಶಿಬಿರದ ಮೇಲುಸ್ತುವಾರಿಯನ್ನು ಶ್ರೀ ಎಸ್.ಎನ್. ಪಾಟೀಲ, ಸ್ಕೌಟ್ ಮಾಸ್ಟರ್ ಹಾಗೂ ಸ್ಥಳೀಯ ಸಂಸ್ಥೆ ಖಜಾಂಚಿ ವಹಿಸಿದ್ದರು.

**********

ದಿನಾಂಕ 17-05-2014 ರಂದು ಶಾರದಾ ಪ್ರೌಢಶಾಲೆಯಲ್ಲಿ ಸ್ಕೌಟ್ಸ್‌ಗಳಿಗೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥಾಪಕರಾದ ಬೇಡನ್ ಪೋವೆಲ್ ರವರ ಬಗ್ಗೆ ಮಾತನಾಡಲು ಭಾಷಣ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಇದರಲ್ಲಿ ಶಾಲೆಯ ಪ್ರಾಂಶುಪಾಲರಾದ ಶ್ರೀ ಮಲ್ಲಿಕಾರ್ಜುನ ಚೌಕಿಮಠ, ಸ್ಕೌಟ್ ಮಾಸ್ಟರ್, ಶಾಲೆಯ ಸಿಬ್ಬಂದಿ ಭಾಗವಹಿಸಿದ್ದರು.

## ಬಿಜಾಪುರ

ದಿನಾಂಕ 11-04-2014 ರಿಂದ 12-04-2014 ರ ವರೆಗೆ ಶ್ರೀ ರಾಮಕೃಷ್ಣ ವಿದ್ಯಾವಸತಿ ಶಾಲೆ ವಿಜಾಪೂರದಲ್ಲಿ ರಾಜ್ಯ ಪುರಸ್ಕಾರ ಮತ್ತು ರಾಷ್ಟ್ರಪತಿ ಪುರಸ್ಕಾರ ಪರೀಕ್ಷೆಯ ಪೂರ್ವಸಿದ್ಧತಾ ಶಿಬಿರ ಹಮ್ಮಿಕೊಳ್ಳಲಾಗಿತ್ತು. ಶಿಬಿರಕ್ಕೆ ಮಾನ್ಯ ಉಪನಿರ್ದೇಶಕರು ಹಾಗೂ ಜಿಲ್ಲಾ ಆಯುಕ್ತರಾದ ಶ್ರೀ ಎಸ್. ವಾಯ್. ಹಳಿಂಗಳಿ ಅವರು ಭೇಟಿನೀಡಿದ್ದರು. 90 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀ ಜಗದೀಶ ಬೋಳಸೂರ, ಗೈಡ್ಸ್ ವಿಭಾಗದಿಂದ ಶ್ರೀಮತಿ ಸಂಧ್ಯಾ ದೇಶಪಾಂಡೆ ಜವಾಬ್ದಾರಿ ವಹಿಸಿಕೊಂಡಿದ್ದರು. ಸಹಾಯಕರಾಗಿ ಶ್ರೀ ಸುನೀಲ ಬಿರಾದಾರ ಪಾಟೀಲ, ಶ್ರೀ ಬಿ.ಎಚ್. ಹೂಗಾರ, ಶ್ರೀ ಜಿ.ಎನ್. ಹೂಗಾರ, ಶ್ರೀಮತಿ ಲತಾ ಬಿರಾದಾರ, ಶ್ರೀಮತಿ ಎಸ್.ಎನ್. ಶಿಂಥೆ, ಶ್ರೀಮತಿ ಪಿ.ಎಮ್. ಪೂಜಾರಿ, ಶ್ರೀಮತಿ ಜಿ.ಆರ್. ಬಿಸನಾಳ, ಶ್ರೀ ಜಹಾಗೀರದಾರ, ಶ್ರೀಮತಿ ಪ್ರಭಾವತಿ ರೆಡ್ಡಿ ಅವರು ಕಾರ್ಯನಿರ್ವಹಿಸಿದರು.

**********

ದಿನಾಂಕ 17-03-2014 ರಂದು ಎಕ್ಸಲೆಂಟ್ ಶಾಲಾ ಮಕ್ಕಳು ಹೊರ ಸಂಚಾರ ಹಮ್ಮಿಕೊಂಡಿದ್ದರು. 95 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಮುಂಜಾನೆ 9.00 ಗಂಟೆಗೆ ವನವಿದ್ಯಾ ಸಂಕೇತಗಳ ಮೂಲಕ ಪ್ರಾರಂಭವಾದ ಹೊರ ಸಂಚಾರ ಮದ್ಯಾಹ್ನ 1.00 ಗಂಟೆಗೆ ಮುಕ್ತಾಯವಾಯಿತು. ದಿನಾಂಕ 17-04 2014 ರಂದು ಸಾರ್ವತ್ರಿಕ ಚುನಾವಣೆ ನಡೆಯಲಿದ್ದು ಪ್ರತಿಯೊಬ್ಬರು ಕಡ್ಡಾಯವಾಗಿ ಮತದಾನ ಮಾಡಬೇಕೆಂದು ಪ್ರಚಾರ ಮಾಡಿದರು. ಸ್ಥಳ ತಲುಪಿದ ನಂತರ ಧ್ವಜಾರೋಹಣ ಮಾಡಿದರು. ಕೌಶಲ್ಯ ವಿಷಯಗಳಾದ ಗಂಟುಗಳು ಮತ್ತು ಲಾಷಿಂಗ್ ಬಗ್ಗೆ ಕಲಿಸಲಾಯಿತು. ಶ್ರೀ ಜಹಾಗಿರದಾರ, ಸ್ಕೌಟ್ ಮಾಸ್ಟರ್, ಜಿಲ್ಲಾ ಸಂಘಟನಾ ಆಯುಕ್ತರು ಶ್ರೀ ಜಗದೀಶ ಬೋಳಸೂರ, ಶ್ರೀ ಸುನೀಲ ಬಿರಾದಾರ ಪಾಟೀಲ ಭಾಗವಹಿಸಿದ್ದರು.

*************

ದಿನಾಂಕ 08-03-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವಿಜಾಪೂರ ಹಾಗೂ ಎಕ್ಸಲಂಟ್ ಶಾಲೆ ವಿಜಾಪೂರ ಇವರ ಸಂಯುಕ್ತಾಶ್ರಯದಲ್ಲಿ ಮಹಿಳಾ ದಿನಾಚರಣೆ ಹಮ್ಮಿಕೊಳ್ಳಲಾಗಿತ್ತು. ಶ್ರೀಮತಿ ಪ್ರಭಾವತಿ ರೆಡ್ಡಿ ಮಾತನಾಡಿ ಇಂದಿನ ದಿನಮಾನದಲ್ಲಿ ಮಹಿಳೆಯರು ಸಾಕಷ್ಟು ಮುಂದೆ ಬರಲು ಆಕೆ ಇಟ್ಟ ದಿಟ್ಟ ಹೆಜ್ಜೆಯೇ ಪ್ರಮುಖ ಕಾರಣ, ರಾಷ್ಟ್ರ ಮತ್ತು ಅಂತರ್ ರಾಷ್ಟ್ರಮಟ್ಟದಲ್ಲಿ ಮಹಿಳೆಯರು ಹೆಸರು ಮಾಡುತ್ತಿದ್ದಾರೆ ಎಂದರು.

ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಜಗದೀಶ ಬೋಳಸೂರ, ಶ್ರೀ ಸುನೀಲ ಬಿರಾದಾರ ಪಾಟೀಲ, ಶ್ರೀಮತಿ ಸರಸ್ವತಿ ಶಿಂಥೆ ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

***********

ಮನುಷ್ಯ ತನ್ನ ಜೀವಿತಾವಧಿಯ ವರೆಗೂ ತಾನು ಎಂದೂ ಅನಾಥ ಎನ್ನುವ ಭಾವನೆ ಕಾಡಬಾರದು ಎಂದು ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಜಗದೀಶ ಬೋಳಸೂರ ಹೇಳಿದರು.

ಅವರು ಅನಾಥ ಆಶ್ರಮ ವಿಜಾಪೂರ ಮತ್ತು ಎಕ್ಸಲೆಂಟ್ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್

ಸಂಯುಕ್ತಾಶ್ರಯದಲ್ಲಿ ಯುಗಾದಿ ಹಬ್ಬವನ್ನು ಆಚರಿಸಿ ಮಾತನಾಡಿದರು. ಆಶ್ರಮದ ಕಾರ್ಯದರ್ಶಿಗಳಾದ ಶ್ರೀ ಕಾಡೆ ಅವರು ಮಾತನಾಡಿ ನಮ್ಮ ಭಾರತ ದೇಶದಲ್ಲಿ ಸಾಕಷ್ಟು ಹೃದಯ ಶ್ರೀಮಂತರಿದ್ದಾರೆ ಆದ್ದರಿಂದ ಈ ಮಕ್ಕಳಿಗೆ ಎಂದೂ ಅನಾಥ ಪ್ರಜ್ಞೆ ಕಾಡುವುದಿಲ್ಲ ಎಂದು ಹೇಳಿದರು. ಇದೇ ಸಂದರ್ಭದಲ್ಲಿ ಜಿ.ಆರ್.ಜಿ. ಮತ್ತು ವಾಯ್. ಪಿ. ಕಾಮರ್ಸ್ ಕಾಲೇಜ್ ಇಂಡಿ, ರೋವರ್ಸ್ ಸ್ಕೌಟ್ಸ್ ದಳದ ರೋವರ್‌ಗಳು, ರೋವರ್ಸ್ ಲೀಡರಾದ ಪ್ರೊ॥ ಎಸ್.ಎಸ್. ಪಾಟೀಲ ಅವರ ನೇತೃತ್ವದಲ್ಲಿ ಅಂಧ ಮತ್ತು ಅನಾಥ ಮಕ್ಕಳ ಸಹಾಯಾರ್ಥ ವಾಗಿ ಕಾಲೇಜ ಕ್ಯಾಂಪಸ್‌ನಲ್ಲಿ ಸಂಗ್ರಹಮಾಡಲಾದ 5,500-00 ರೂ. ನಿಧಿಯನ್ನು ನೀಡಿದರು. ಹಾಗೂ ಶ್ರೀ ಜಗದೀಶ ಬೋಳಸೂರ ಡಿ.ಓ.ಸಿ., ವಿಜಾಪೂರ ಇವರು ಪ್ರತಿ ವಿದ್ಯಾರ್ಥಿಗೆ ಐದು ನೋಟ್ ಬುಕ್ ನೀಡುತ್ತಿರುವುದಾಗಿ ಹೇಳಿದರು. ವೇದಿಕೆ ಮೇಲೆ ಭಾರತ ಯುವ ಸೇನೆಯ ನಗರ ಅಧ್ಯಕ್ಷ ಶ್ರೀ ಅಬ್ದುಲ್ ಅನ್ವರ, ಸ ಶ್ರೀ ದೇಶಪಾಂಡೆ, ಶ್ರೀ ಮುರಗೋಡ ಉಪಸ್ಥಿತಿ ಇದ್ದರು.

**********

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ಬಾಬು ಜಗಜೀವನರಾಮ್ ರವರ ಜಯಂತಿ ಆಚರಿಸಲಾಯಿತು. ಜಿಲ್ಲಾ ಆಯುಕ್ತರು(ಸ್ಕೌ) ಆದ ಶ್ರೀ ಬಸವರಾಜ ಗೌನಳ್ಳಿ, ಉಪ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಬೀದರ ರವರು ಜಗಜೀವನರಾಂ ಭಾವಚಿತ್ರಕ್ಕೆ ಪೂಜೆ ಸಲ್ಲಿಸಿ ಮಾತನಾಡುತ್ತಾ ಬಾಬು ಜಗಜೀವನರಾಮ್ ಭಾರತ ಕಂಡ ಶ್ರೇಷ್ಠ ನಾಯಕರಲ್ಲಿ ಒಬ್ಬರು ಧೀಮಂತ ವ್ಯಕ್ತಿತ್ವ, ಸರಳತೆ, ಕ್ರಿಯಾಶೀಲ ವ್ಯಕ್ತಿ ಅವರಾಗಿದ್ದರು ಎಂದು ತಿಳಿಸಿದರು. ಇದೇ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಕಛೇರಿ ಸಿಬ್ಬಂದಿಗಳು ಹಾಜರಿದ್ದರು.

************

ದಿನಾಂಕ 01-05-2014 ರಂದು ಕಾರ್ಮಿಕ ಕಲ್ಯಾಣ ಇಲಾಖೆ ಹಮ್ಮಿಕೊಂಡ "ವಿಶ್ವ ಕಾರ್ಮಿಕರ ದಿನಾಚರಣೆ"ಯಲ್ಲಿ ಭಾಗವಹಿಸಲಾಯಿತು. ಇದೇ ಸಂದರ್ಭದಲ್ಲಿ ಜಿಲ್ಲಾ ಕಾರ್ಮಿಕ ಅಧಿಕಾರಿಗಳು ಕಾರ್ಮಿಕರ ಕಲ್ಯಾಣ ಇಲಾಖೆಯ ವಿವಿಧ ಯೋಜನೆಗಳು. ಕಾರ್ಮಿಕ ಪುನರ್ವಸತಿ ಶಿಕ್ಷಣ ಕಲ್ಯಾಣ ಮುಂತಾದ ಯೋಜನೆಗಳ ಕುರಿತು ಹೇಳಿದರು. ಕಾರ್ಯಕ್ರಮದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.

************

ದಿನಾಂಕ 02-05-2014 ರಂದು ಬೀದರ ಜಿಲ್ಲೆಯಲ್ಲಿ ರಾಷ್ಟ್ರೀಯ ಬಸವದಳ ಬಸವ ಪ್ರತಿಷ್ಠಾನ ವತಿಯಿಂದ ಬಸವ ಜಯಂತಿ ಕಾರ್ಯಕ್ರಮ ಜರುಗಿತು. ನಗರದ ಭೂಮರೆಡ್ಡಿ ಪದವಿ ಕಾಲೇಜಿನ ರೋವರ್ಸ್-ರೇಂಜರ್ಸ್ ಜಾಥಾದಲ್ಲಿ ಭಾಗವಹಿಸಿ ಸೇವೆ ಸಲ್ಲಿಸಿದರು. ಇದೇ ಸಂದರ್ಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಡಾ.ಎಸ್.ಎಸ್. ಸಿದ್ದಾರಡ್ಡಿ, ಜಿಲ್ಲಾ ಕಾರ್ಯದರ್ಶಿ ಶೇಖ್ ಮುಸ್ತಾಕ್ ಅಲಿ, ಜಿಲ್ಲಾ ಗೈಡ್ಸ್ ಆಯುಕ್ತೆ ಶ್ರೀಮತಿ ಲೀಲಾವತಿ ಚಕೋತೆ ಮತ್ತು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು.

ಅಂದು ಸಂಜೆ 'ಶರಣ ಉದ್ಯಾನ' ದಲ್ಲಿ ನಡೆದ "ಬಸವಣ್ಣ ಯುಗ ಪುರುಷ" ಕಾರ್ಯಕ್ರಮದಲ್ಲಿ ರೋವರ್‌ಗಳು ಸೇವೆ ಸಲ್ಲಿಸಿದರು.

************

ದಿನಾಂಕ 02-05-2014 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ಸಂಯುಕ್ತಾಶ್ರಯದಲ್ಲಿ "ಜಗಜ್ಯೋತಿ ಬಸವೇಶ್ವರ ಜಯಂತಿ"ಯನ್ನು ಉಪನಿರ್ದೇಶಕರ ಕಛೇರಿಯಲ್ಲಿ ಆಚರಿಸಲಾಯಿತು. ಜಿಲ್ಲಾ ಆಯುಕ್ತ (ಸ್ಕೌಟ್) ಶ್ರೀ ಬಸವರಾಜ ಗೌನಳ್ಳಿ ರವರು ವಿಶ್ವಗುರು ಬಸವೇಶ್ವರರ ಭಾವಚಿತ್ರಕ್ಕೆ ಪೂಜೆ ಮಾಲಾರ್ಪಣೆ ಮಾಡಿ ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಇದೆ ಸಂದರ್ಭದಲ್ಲಿ ಸ್ಕೌಟ್ಸ್-ಗೈಡ್ಸ್ ನೋಡೆಲ್ ಅಧಿಕಾರಿ ಶ್ರೀ ದೇರವಪ್ಪನವರು, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

**********

ದಿನಾಂಕ 10-04-2014 ರಿಂದ 15-04-2014 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಬೇಸಿಗೆ ಶಿಬಿರವನ್ನು ಗುರುನಾನಕ್ ಪಬ್ಲಿಕ್ ಶಾಲೆ, ಬೀದರ ಇಲ್ಲಿ ಸಂಘಟಿಸಲಾಯಿತು. ಶಿಬಿರದಲ್ಲಿ ನಗರದ ವಿವಿಧ ಶಾಲೆಗಳ 86 ಸ್ಕೌಟ್ಸ್-ಗೈಡ್ಸ್‌ಗಳು 05 ಸ್ಕೌಟರ್ಸ್, 03 ಗೈಡರ್ಸ್‌ಗಳು ಭಾಗವಹಿಸಿದರು. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಶಿಬಿರಕ್ಕೆ ಭೇಟಿನೀಡಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪ್ರೋತ್ಸಾಹಿಸಿದರು.

## ಕಾರವಾರ

ದಿನಾಂಕ 14-04-2014 ರಂದು ಮಾರ್ಥೋಮಾ ಶಾಲೆಯಲ್ಲಿ ಸಂವಿಧಾನ ಶಿಲ್ಪಿ ಡಾ|| ಬಾಬಾ ಸಾಹೇಬ್ ಅಂಬೇಡ್ಕರ್ ರವರ ಜಯಂತಿಯನ್ನು ಆಚರಿಸಲಾಯಿತು.

ಅತಿಥಿಗಳಾಗಿ ಬಂದ ಶ್ರೀ ಬಿ.ಡಿ. ಫರ್ನಾಂಡೀಸ್, ಜಿಲ್ಲಾ ಸ್ಕೌಟ್ ಕಾರ್ಯದರ್ಶಿ ಅವರು ಬಾಬಾ ಸಾಹೇಬ್‌ರವರ ಭಾವಚಿತ್ರಕ್ಕೆ ಹೂಗಳನ್ನು ಅರ್ಪಿಸುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಅವರು ಮಾತನಾಡಿ ಮಹಾನ್ ವ್ಯಕ್ತಿಗಳಾದ ಅಂಬೇಡ್ಕರ್‌ರವರ ಆದರ್ಶ, ದೇಶಪ್ರೇಮ, ಜೀವನ ಮೌಲ್ಯಗಳನ್ನು ಎಲ್ಲರೂ ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವ ಅಗತ್ಯ. ಇದೆ ಎಂದರು.

ಈ ಕಾರ್ಯಕ್ರಮದಲ್ಲಿ ಶಾಲೆಯ ಆಡಳಿತ ಕಛೇರಿಯ ಮುಖ್ಯಸ್ತರಾದ ಮಿಸ್ ಶೀಲಾ ಸೋನ್ಸ್ ಶ್ರೀ ದೀಪಕ್ ರೋಡ್ರಗಿಸ್, ಮಿಸ್. ರೇಷ್ಮಾ ಚಾರೋಡಿ ಹಾಗು ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.

## ದಕ್ಷಿಣ ಕನ್ನಡ

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಪಂಜ ಹಾಗೂ ಜೆ.ಸಿ.ಐ., ಪಂಜ ಪಂಚಶ್ರೀ ಸಹಯೋಗದೊಂದಿಗೆ ಪಂಜ-ಕಡಬ ರಸ್ತೆಯ ಕುಮಾರಧಾರಾ ನದಿಯ ಪುಳಿಕುಕ್ಕಿನಲ್ಲಿ ಈಜು ತರಬೇತಿ ಶಿಬಿರ ಆರಂಭಗೊಂಡಿತು.

ಹಿರಿಯ ಕ್ರೀಡಾಪಟು ಶ್ರೀ ಬಾಲಕೃಷ್ಣ ಕುದ್ವ ಶಿಬಿರವನ್ನು ಉದ್ಘಾಟಿಸಿದರು. ಪಂಜ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಅಧ್ಯಕ್ಷ ಶ್ರೀ ವಾಸುದೇವ ನಡ್ಕ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

ರಾ.ಸ.ಸಂ. ಆಯುಕ್ತ ಶ್ರೀ ಪ್ರಭಾಕರ್ ಭಟ್ ಹಾಗೂ ಜೆ.ಸಿ.ಐ. ಪಂಜಶ್ರೀ ಅಧ್ಯಕ್ಷ ಶ್ರೀ ಚಂದ್ರಶೇಖರ ಕುಕ್ಕುಮಣಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಪಂಜ ಇದರ ಪ್ರಧಾನ ಕಾರ್ಯದರ್ಶಿ ಶ್ರೀ ಉದಯಕುಮಾರ್ ರೈ ಎಸ್. ಬಾಳಿಲ, ಶ್ರೀ ದೇವಿಪ್ರಸಾದ್ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಶ್ರೀ ದೇವಿ ಪ್ರಸಾದ್ ಜಾಕೆ ಸ್ವಾಗತಿಸಿ, ವಂದಿಸಿದರು. ಶ್ರೀ ಉದಯಕುಮಾರ್ ಕಾರ್ಯಕ್ರಮ ನಿರ್ವಹಿಸಿದರು.

*************

ಸುಭಾಷ್ ಚಂದ್ರ ಬೋಸ್ ಸ್ಕೌಟ್ಸ್ ದಳ, ರಾಣಿ ಅಬ್ಬಕ್ಕ ಗೈಡ್ ಕಂಪೆನಿ, ನಿತ್ಯಾಧರ್ ಆಂಗ್ಲ ಮಾಧ್ಯಮ ಶಾಲೆ ನಿತ್ಯಾಧರ್ ನಗರ, ಸೌಜನ್ಯ ಸ್ಕೌಟ್ಸ್ ದಳ ಮತ್ತು ಸೌಜನ್ಯ ಗೈಡ್ಸ್ ಕಂಪೆನಿ, ರಾಮಕೃಷ್ಣ ಪ್ರೌಢಶಾಲೆ ಹರೇಕಳ ಹಾಗೂ ವಿದ್ಯಾರತ್ನ ಸ್ಕೌಟ್ಸ್ ದಳ ಮತ್ತು ಗೈಡ್ಸ್ ಕಂಪೆನಿ, ವಿದ್ಯಾರತ್ನ ಆಂಗ್ಲ ಮಾಧ್ಯಮ ಶಾಲೆ ದೇರಳೇಕಟ್ಟೆ ಸಂಯುಕ್ತಾಶ್ರಯದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ವಿದ್ಯಾರ್ಥಿಗಳಿಗೆ ಮೂರು ದಿನಗಳ ಭಾವೈಕ್ಯತಾ ಶಿಬಿರ – 2014 ಪೆರ್ಮನ್ನೂರು ನಿತ್ಯಾಧರ್ ನಗರದ ನಿತ್ಯಾಧರ್ ಆಂಗ್ಲ ಮಾಧ್ಯಮ ಶಾಲೆಯಲ್ಲಿ ಇತ್ತೀಚೆಗೆ ನಡೆಯಿತು.

ಮಂಗಳೂರು ದಕ್ಷಿಣ ವಲಯ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಕೆ. ಸುಧಾಕರ್ ಶಿಬಿರ ಉದ್ಘಾಟಿಸಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ದಕ್ಷಿಣ ಕನ್ನಡ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎನ್.ಜಿ. ಮೋಹನ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ನಿತ್ಯಾಧರ್ ಆಂಗ್ಲ ಮಾಧ್ಯಮ ಶಾಲೆಯ ಸಂಚಾಲಕ ಫಾ. ಫ್ರಾನ್ಸಿಸ್ ಕ್ರಾಸ್ತ, ಜಿಲ್ಲಾ ಕೋಶಾಧಿಕಾರಿ ಶ್ರೀ ವಾಸುದೇವ ಬೋಳೂರು, ಜಿಲ್ಲಾ ಗೈಡ್ ಆಯುಕ್ತೆ ಐರಿನ್ ಡಿ' ಕುನ್ಹಾ, ಸಹಾಯಕ ರಾಜ್ಯ ಸಂಘಟನಾ ಆಯುಕ್ತ ಶ್ರೀ ಎಂ. ಪ್ರಭಾಕರ್ ಭಟ್ ಹರೇಕಳ ರಾಮಕೃಷ್ಣ ಪ್ರೌಢಶಾಲೆಯ ಮುಖ್ಯ ಶಿಕ್ಷಕ ರವೀಂದ್ರ ರೈ ಹರೇಕಳ, ಕುತ್ತಾರು ಶ್ರೀ ರಾಜರಾಜೇಶ್ವರಿ ಸಿದ್ಧಿವಿನಾಯಕ ದೇವಸ್ಥಾನದ ಅಧ್ಯಕ್ಷ ಶ್ರೀ ದಿನೇಶ್ ಎಲ್.ಎಸ್. ಕುತ್ತಾರು, ದುರ್ಗಾವಾಹಿನಿ ಮಹಿಳಾ ಮಂಡಳಿ ಅಧ್ಯಕ್ಷೆ ಶ್ರೀಮತಿ ಧನಲಕ್ಷ್ಮಿ, ಶ್ರೀ ಹರೀಶ್ ಕುಮಾರ್ ಕುತ್ತಾರ್, ಶಿಕ್ಷಕ–ರಕ್ಷಕ ಸಂಘದ ಕಾರ್ಯದರ್ಶಿ ಶ್ರೀ ಬಾಬು ಪಿಲಾರ್, ನಿವೃತ್ತ ಶಿಕ್ಷಕ ಶ್ರೀ ಎಂ.ಜೆ. ಕಜೆ, ಅಂಬ್ಲಮೊಗರು ಶಾಲಾ ಮುಖ್ಯ ಶಿಕ್ಷಕ ಶ್ರೀ ಜಗದೀಶ್ ಶೆಟ್ಟಿ ಶಿಬಿರ ಸಹನಿರ್ದೇಶಕರಾದ ಶ್ರೀಮತಿ ರೀನಾ ವಿಲ್ಮ ಡಿ'ಸೋಜ ಹಾಗೂ ಲವೀನಾ ಕೊರಿಯ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಕಾರ್ಯಕ್ರಮದಲ್ಲಿ ರಾಜ್ಯ ಪುರಸ್ಕಾರ ಮತ್ತು ರಾಷ್ಟ್ರ ಪುರಸ್ಕಾರ ಪಡೆದ ಸ್ಕೌಟ್ಸ್ ಗೈಡ್ಸ್‌ಗಳನ್ನು ಸನ್ಮಾನಿಸಲಾಯಿತು. ಶಿಬಿರದ ನಿರ್ದೇಶಕ ಶ್ರೀ ತ್ಯಾಗಂ ಹರೇಕಳ ಸ್ವಾಗತಿಸಿದರು. ನಿತ್ಯಾಧರ್ ಪ್ರೌಢಶಾಲೆಯ ಶಿಕ್ಷಕಿ ಶ್ರೀಮತಿ ಸುಜಾತ ಕಾರ್ಯಕ್ರಮ ನಿರ್ವಹಿಸಿದರು. ಶಿಬಿರದ ಸಹ ನಿರ್ದೇಶಕ ಶ್ರೀ ಭಾಸ್ಕರ್ ವಂದಿಸಿದರು.

************

ಒಬ್ಬು ಕಟ್ಟೆಯ ನಿತ್ಯಾಧರ್ ಆಂಗ್ಲ ಮಾಧ್ಯಮ ಶಾಲೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಅಧ್ಯಾಪಕರುಗಳು ಮತ್ತು ವಿದ್ಯಾರ್ಥಿಗಳಿಗಾಗಿ ಪುನಶ್ಚೇತನ ಶಿಬಿರ ಇತ್ತೀಚೆಗೆ ನಡೆಯಿತು.

ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕ ಶ್ರೀ ಮೋಸೆಸ್ ಜಯಶೇಖರ್ ಶಿಬಿರ ಉದ್ಘಾಟಿಸಿ ಮಾತನಾಡಿ, ಪ್ರತಿಯೊಬ್ಬರು ಶಿಕ್ಷಣದೊಂದಿಗೆ ಮಾನವೀಯ ಮೌಲ್ಯಗಳನ್ನು ಬೆಳೆಸಿಕೊಂಡು ಪರಸ್ಪರ ಪ್ರೀತಿ, ಸೌಹಾರ್ದತೆಯೊಂದಿಗೆ ಬಾಳಲು ಕಲಿತುಕೊಳ್ಳಬೇಕೆಂದು ಕರೆ ನೀಡಿದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ ಸ್ಕೌಟ್ಸ್ ಜಿಲ್ಲಾ ಆಯುಕ್ತ ಶ್ರೀ ರಾಮಶೇಷ ಶೆಟ್ಟಿ ಮಾತನಾಡಿ ಅಧ್ಯಾಪಕರು ಪ್ರತಿನಿತ್ಯ ಹಲವಾರು ಪುಸ್ತಕಗಳನ್ನು ಓದುವುದರೊಂದಿಗೆ ಜ್ಞಾನ ಮತ್ತು ಕೌಶಲ್ಯವನ್ನು ಅಭಿವೃದ್ಧಿ ಪಡಿಸಿಕೊಳ್ಳಬೇಕು ಎಂದರು.

ಮುಖ್ಯ ಅತಿಥಿಯಾಗಿ ಮಂಗಳೂರು ವಿಶ್ವವಿದ್ಯಾಲಯದ ಜೀವ ವಿಜ್ಞಾನ ವಿಭಾಗದ ಅಸೋಸಿಯೇಟ್ ಪ್ರೊಫೆಸರ್ ಡಾ. ಪ್ರಶಾಂತ್ ನ್ಯಾಕ್, ಶ್ರೀ ನಂದಕುಮಾರ್ ಬಬ್ಬುಕಟ್ಟೆ, ಶ್ರೀ ಹಸನ್ ಬಬ್ಬುಕಟ್ಟೆ, ಶ್ರೀ ಹಸನ್

ಸಾಹೇಬ್, ಮುನ್ನೂರು ಯುವ ಮಂಡಲದ ಗೌರವಾಧ್ಯಕ್ಷ ಶ್ರೀ ಹರೀಶ್ ಮುಂಡೋಳಿ, ಅನ್ನಲಕ್ಷ್ಮಿ ಫೌಂಡೇಷನ್‌ನ ಶ್ರೀ ಲೋಹಿತ್ ಕುಮಾರ್, ವಿದ್ಯಾರತ್ನ ವಿದ್ಯಾಸಂಸ್ಥೆಯ ಶ್ರೀ ರವೀಂದ್ರ ಶೆಟ್ಟಿ ಉಳಿದೊಟ್ಟು, ಶ್ರೀ ಗುರುಮೂರ್ತಿ ನಾಯ್ಕಾಪು ಹಾಗೂ ಶ್ರೀ ಎಂ.ಜೆ. ಕಜೆ ಕುತ್ತಾರು ಉಪಸ್ಥಿತರಿದ್ದರು.

ಶಿಬಿರದ ನಿರ್ದೇಶಕರಾದ ಶ್ರೀ ತ್ಯಾಗಂ ಹರೇಕಳ ಸ್ವಾಗತಿಸಿದರು. ಶ್ರೀಮತಿ ಗೀತ ಸಲ್ದಾನ ವಂದಿಸಿದರು. ಗೈಡ್ ಶಿಕ್ಷಕಿ ಶ್ರೀಮತಿ ಚಂದ್ರಕಲಾ ದೇರಳಕಟ್ಟೆ ಕಾರ್ಯಕ್ರಮ ನಿರ್ವಹಿಸಿದರು.

## ತುಮಕೂರು

ದಿನಾಂಕ 11-04-2014 ರಿಂದ 14-04-2014 ರ ವರೆಗೆ ಶ್ರೀ ಸಿದ್ದೇಶ್ವರ ದೇವಸ್ಥಾನದ ಆವರಣದಲ್ಲಿ ಶ್ರೀ ಸಿದ್ಧರ ಬೆಟ್ಟ ಕ್ಷೇತ್ರ ಇಲ್ಲಿ ನಡೆದ ಸಮುದಾಯ ಸೇವಾ ಶಿಬಿರದಲ್ಲಿ ಸ್ಕೌಟ್ಸ್-ಗೈಡ್ಸ್, ರೋವರ್ಸ್, ರೇಂಜರ್ಸ್, ಭಾಗವಹಿಸಿದ್ದರು. ಸುಮಾರು 200 ಸ್ಕೌಟ್ಸ್, ಗೈಡ್ಸ್, ರೋವರ್ಸ್, ರೇಂಜರ್ಸ್ ವಿದ್ಯಾರ್ಥಿಗಳು ಮತ್ತು 10 ರೋವರ್ ಲೀಡರ್ಸ್, ರೇಂಜರ್ ಲೀಡರ್ಸ್, ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀ ಕಾಂತರಾಜ್ ಹೆಚ್.ಡಬ್ಲ್ಯೂ.ಬಿ. ರವರು ಮತ್ತು ಶ್ರೀಮತಿ ಸುಮನಾ ರವರು ಕಾರ್ಯನಿರ್ವಹಿಸಿದರು. ಶಿಬಿರದ ಸಂಯೋಜಕರಾಗಿ ಶ್ರೀ ಕರಿಸಿದ್ದಪ್ಪ, ಡಿ.ಓ., ಕಾರ್ಯನಿರ್ವಹಿಸಿದರು. ಪ್ರಾಂಶುಪಾಲರು ಮತ್ತು ಮುಜರಾಯಿ ಇಲಾಖೆಯ ತಹಶೀಲ್ದಾರರವರಾದ ಶ್ರೀಮತಿ ಸಿದ್ಧ ಗಂಗಮ್ಮನವರು ಶಿಬಿರಕ್ಕೆ ಭೇಟಿ ನೀಡಿದ್ದರು.

## ಬಾಗಲಕೋಟೆ

ದಿನಾಂಕ 27-03-2014 ರಿಂದ 30-03-2014 ರ ವರೆಗೆ ಜಿಲ್ಲಾ ಮಟ್ಟದ ರೋವರ್ಸ್-ರೇಂಜರ್ಸ್ ನ ಪದಕ ಪರೀಕ್ಷಾ ಶಿಬಿರವನ್ನು ಶ್ರೀ ಸಂಗಮೇಶ್ವರ ದೇವಸ್ಥಾನ ಚಿಕ್ಕ ಸಂಗಮ ತಾ॥ ಬೀಳಗಿ ಇಲ್ಲಿ ಜರುಗಿಸಲಾಯಿತು. ಪದಕ ಪರೀಕ್ಷಾ ಶಿಬಿರದಲ್ಲಿ 134 ರೋವರ್ಸ್, 51 ರೇಂಜರ್ಸ್ ಭಾಗವಹಿಸಿದ್ದರು. ಶಿಬಿರದಲ್ಲಿ ರೋವರ್ಸ್ ವಿಭಾಗಕ್ಕೆ ನಾಯಕರಾಗಿ ಶ್ರೀ ಎಮ್. ಪ್ರಭಾಕರ ಭಟ್ ಎ.ಎಸ್.ಓ.ಸಿ., ಉಡುಪಿ ಹಾಗೂ ರೇಂಜರ್ಸ್ ವಿಭಾಗಕ್ಕೆ ನಾಯಕಿಯಾಗಿ ಶ್ರೀಮತಿ ಕೆ.ವಿ. ಶಾಮಲ, ಎ.ಎಸ್.ಓ.ಸಿ., ಬೆಂಗಳೂರು ಇವರುಗಳು ಕಾರ್ಯ ನಿರ್ವಹಿಸಿದರು ಮತ್ತು ಜಿಲ್ಲೆಯ ಹೆಚ್.ಡಬ್ಲ್ಯೂ.ಬಿ., ಹೋಲ್ಡರ್ಸ್ ಹಾಗೂ ಕಾಲೇಜಿನ ರೋವರ್ಸ್ ರೇಂಜರ್ಸ್ ಉಪನ್ಯಾಸಕರುಗಳು ಶಿಬಿರದ ನಾಯಕರೊಂದಿಗೆ ಸಹಾಯಕರಾಗಿ ಕಾರ್ಯನಿರ್ವಹಿಸಿದರು. ಹಾಗೂ ಜಿಲ್ಲಾ ಸಂಘಟಕರು ಶ್ರೀ ಎಸ್.ಹೆಚ್. ಹತ್ತಿಮತ್ತೂರ ಶಿಬಿರದ ಉಸ್ತುವಾರಿಯನ್ನು ನೋಡಿಕೊಂಡರು. ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಚಂದ್ರಶೇಖರಸಾವಳಗಿ ಶಿಬಿರದ ಯಶಸ್ವಿಗೆ ಸಲಹೆಗಳನ್ನು ನೀಡಿದರು.

ಜಿಲ್ಲಾ ಪದಾಧಿಕಾರಿಗಳು, ಶ್ರೀ ಎ.ಎಂ. ಮಡಿವಾಳರ, ಉಪನಿರ್ದೇಶಕರು ಮತ್ತು ಜಿಲ್ಲಾ ಮುಖ್ಯ ಆಯುಕ್ತರು ಮತ್ತು ಕಾಲೇಜಿನ ಪ್ರಾಚಾರ್ಯರುಗಳು ಶಿಬಿರಕ್ಕೆ ಭೇಟಿನೀಡಿ ತಮ್ಮ ಅನಿಸಿಕೆಗಳನ್ನು ಹಂಚಿಕೊಂಡರು

***********

ದಿನಾಂಕ 05-05-2014 ರಂದು ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಎಂ.ಎ. ಖಾಲಿದ್ ಅವರು ಜಿಲ್ಲಾ ಸಂಸ್ಥೆಗೆ ಭೇಟಿನೀಡಿದ್ದರು. ಬೇಟಿಯ ಸಂದರ್ಭದಲ್ಲಿ ಜಿಲ್ಲಾ ಪದಾಧಿಕಾರಿಗಳಾದ ಶ್ರೀ ಚಂದ್ರಶೇಖರಸಾವಳಗಿ ಮತ್ತು ಉಪಾಧ್ಯಕ್ಷರಾದ ಶ್ರೀ ಜಿ.ಎಸ್. ಪಾಟೀಲ ರವರುಗಳೊಂದಿಗೆ ಜಿಲ್ಲೆಯ ಬಗ್ಗೆ ಚರ್ಚಿಸಿದರು.

.............. ಹಿಂದಿನ ಸಂಚಿಕೆಯಿಂದ

ಅಧ್ಯಾಯ – 3 ಶಿಬಿರಾಗ್ನಿ ಉದಂತ ಸಂ–10

# ಕಾರ್ಯಸರಣಿ

## ಶಿಬಿರದಲ್ಲಿ ಅಡಿಗೆ ಮಾಡುವುದು

## (COOKING IN THE CAMP)

## ಅಡಿಗೆ ಮಾಡುವುದು – ನೈರ್ಮಲ್ಯ – ಶಿಬಿರದ ಆಟಗಳು

**ಬೋಧಕರಿಗೆ ಸಲಹೆಗಳು :**

1. **ಹಿಟ್ಟನ್ನು ಕಲಸಿ, ಹುದುಗಿಸಿ, ರೊಟ್ಟಿ ಸುಡುವುದನ್ನು ಅಭ್ಯಾಸ ಮಾಡಿಕೊಳ್ಳುವುದು :** ಇದು ಉಪಯೋಗಕ್ಕೆ ಬರುತ್ತದೆ. ಸಾಧ್ಯವಾದರೆ ರೊಟ್ಟಿ ಸುಡುವ ಉದ್ಯೋಗದವನನ್ನು (Baker) ಕರೆಸಿ, ಶಿಕ್ಷಣ ಕೊಡಿಸಿ, ಪ್ರತಿ ಸ್ಕೌಟೂ ಅವನವನದೇ ಹಿಟ್ಟು ಕಲೆಸಿ, ಹುದುಗಿಸಿ, ರೊಟ್ಟಿ ಸುಡಲಿ, ನೀರು ಹೆಚ್ಚು ಕಡಿಮೆ ಆಗುವುದು. ಸುಡುವುದು ಹೆಚ್ಚು ಕಡಿಮೆ ಆಗುವುದು ಮೊದಲಾದ ತಪ್ಪುಗಳು ಆದರೆ ಆಗಲಿ. ತಪ್ಪು ಮಾಡಿ ಬುದ್ಧಿ ಕಲಿಯಲಿ.
2. ಸ್ಕೌಟುಗಳು, ಬೇಕಾದ ದಿನಸಿ ಚೀಲಗಳನ್ನು ಅವರೇ ತಯಾರಿಸಿಕೊಳ್ಳಲಿ. ಆಹಾರ ದಿನಸಿಗಳನ್ನು ವಿತರಣೆ ಮಾಡಿ. ಸ್ಕೌಟುಗಳು ಅವರವರೇ ಅಡಿಗೆ ಮಾಡಿಕೊಳ್ಳಲಿ.

**ಶಿಬಿರದ ಆಟಗಳು**

1. ಕಬಡ್ಡಿ, ಖೋಖೋ, ಚೆಣ್ಣಿದಾಂಡು, ರೌಂಡರ್ಸ್, ಹಾಕಿ, ಫುಟ್ ಭಾಲ್, ಬ್ಯಾಸ್ಕೆಟ್ ಬಾಲ್ ಇವೆಲ್ಲವನ್ನೂ ಆಡಬಹುದು. ಬ್ಯಾಸ್ಕೆಟ್ ಬಾಲ್ ಆಟವನ್ನು ಕೈಗಳಿಂದ ಆಡುವ ಫುಟ್ ಬಾಲ್ ಎನ್ನಬಹುದು. ಇದರ ಗೋಲು, ನೆಲದಿಂದ ಮೇಲೆ 5.15 ಮೀ. ಎತ್ತರದಲ್ಲಿರುವ ಬುಟ್ಟಿಯಲ್ಲಿರುತ್ತದೆ. ಇದಕ್ಕೆ ಒಂದು ಸಣ್ಣ ಪ್ರದೇಶ, ಕೋಣೆ ಅಥವಾ ಆಟದ ಅಂಗಳವಿದ್ದರೆ ಸಾಕು.
2. **ಕರಡಿ ಹೊಡಿ :** ("ಬ್ಯಾಂಗ್ ದಿ ಬೇರ್" ಶ್ರೀ ಥಾಂಸನ್ ಸೆಟನ್ ರವರ "ಮ್ಯಾನ್ಯುಯಲ್ ಆಫ್ ದಿ ವುಡ್ ಕ್ರಾಫ್ಟ್ ಇಂಡಿಯನ್ಸ್" ಪುಸ್ತಕದಿಂದ) ಒಬ್ಬ ದೊಡ್ಡ ಹುಡುಗನು ಕರಡಿಯಾಗುತ್ತಾನೆ. ಉಳಿದವರೆಲ್ಲರೂ ಬೇಟೆಗಾರರು. ಕರಡಿಯು ಸುರಕ್ಷಿತವಾಗಿ ಅವಿತುಕೊಳ್ಳಲು 3 ತಾಣ (Base) ಗಳಿರುತ್ತವೆ. ಅದರ ಬೆನ್ನಿನ ಮೇಲೆ ಒಂದು ಸಣ್ಣ ಬೆಲೂನ್ ಇರುತ್ತದೆ. ಅದು ತಾಣವನ್ನು ಬಿಟ್ಟು ಹೊರಕ್ಕೆ ಬಂದಾಗ

ಒಡೆದುಹಾಕಲು ಎಲ್ಲಾ ಬೇಟೆಗಾರರ ಬಳಿಯೂ ದಾರ ಸುತ್ತಿದ ಹುಲ್ಲಿನ ಗದೆಗಳು ಇರುತ್ತವೆ. ಕರಡಿಯ ಬಳಿಯೂ ಅಂತಹುದೇ ಗದೆಯು ಇರುತ್ತದೆ. ಬೆಲೂನ್ ಕರಡಿಯ ಪ್ರಾಣವಾದರೆ, ಹ್ಯಾಟ್ ಅಥವಾ ಟೋಪಿಯು ಬೇಟೆಗಾರರ ಪ್ರಾಣವಾಗಿರುತ್ತದೆ. ಕರಡಿಯು ತನ್ನ ಗದೆಯನ್ನು ಬೇಟೆಗಾರರ ಪ್ರಾಣ ತೆಗೆಯಲು ಉಪಯೋಗಿಸಬಹುದು. ಈ ಆಟವು ನಾಚಿಕೆಯ ಸ್ವಭಾವದ ಮತ್ತು ಹೊಸಬರಾದ ಬಾಲಕರಿಗೆ ಪರಸ್ಪರ ಅರ್ಥಮಾಡಿಕೊಳ್ಳಲು, ಬಹಳ ಸ್ವಾರಸ್ಯಕರವಾದ ಆಟವಾಗಿರುತ್ತದೆ.

## ಅಡಿಗೆ ಮಾಡುವುದರಲ್ಲಿ ಪೆಟ್ರೋಲ್ ಅಭ್ಯಾಸಗಳು

1. ಶಿಬಿರಕ್ಕೆ ಹೊರಡುವುದಕ್ಕೆ ಮುಂಚೆ, ಅಡಿಗೆ ಮಾಡಲು ಬರಬೇಕು. ಮುಖ್ಯವಾಗಿ ಬೇಕಾದ ಆಲೂಗಡ್ಡೆ ಬೇಯಿಸುವುದು. ಗಂಜಿ, ಅಂಬಲಿ ತಯಾರಿಸುವುದು, ಮಾಂಸ, ತರಕಾರಿಗಳನ್ನು ಬೇಯಿಸುವುದು ಬರಬೇಕು.

   ಇವುಗಳನ್ನೆಲ್ಲಾ ಚಳಿಗಾಲದಲ್ಲಿ ಅಭ್ಯಾಸ ಮಾಡಿಕೊಳ್ಳಬಹುದು.

2. ಹಿಟ್ಟನ್ನು ಕಲಸುವುದು, ನಾದುವುದು, ಹುದುಗಿಸುವುದು ಮತ್ತು ಕೆಂಡರೊಟ್ಟಿ (Damper) ಹಾಗೂ ಸುರುಳಿ ರೊಟ್ಟಿ (Twists) ಗಳನ್ನು ಮಾಡಲು ಅಭ್ಯಾಸ ಮಾಡಿ.

3. ಒಣ ಹುಲ್ಲಿನ ಪೆಟ್ಟಿಗೆಯನ್ನು ಮಾಡಿ, ಉಪಯೋಗಿಸಿ

4. ನಿಮ್ಮದೇ ಆದ ದಿನಸಿ ಚೀಲಗಳನ್ನು ಹೊಲಿದುಕೊಳ್ಳಿರಿ

5. ಪ್ರತಿ ದಿನದ ಭಕ್ಷ್ಯಗಳನ್ನು ಪಟ್ಟಿ ಮಾಡುವುದು, ಅವುಗಳಿಗೆ ಬೇಕಾದ ಸಾಮಾನುಗಳ ಪಟ್ಟಿ ಮಾಡುವುದು, ಮೊದಲಾದವುಗಳ ಬಗ್ಗೆ, ಪೆಟ್ರೋಲ್ ಸ್ಪರ್ಧೆಯನ್ನಿಟ್ಟುಕೊಳ್ಳಿ.

6. ಹೊರ ಸಂಚಾರದ ವೇಳೆಯಲ್ಲಿ ಕಚ್ಚಾ ಸಾಮಾನುಗಳನ್ನು ತಂದು ಬಯಲಿನಲ್ಲಿ ಬೆಂಕಿ ಹೊತ್ತಿಸಿ, ಅಡಿಗೆಯನ್ನು ಮಾಡಿಕೊಳ್ಳಿ.

7. ಬೇರೆ ಬೇರೆ ರೀತಿಯ ಒಲೆಗಳನ್ನು ಮಾಡಿ, ನಿಮ್ಮ ಪೆಟ್ರೋಲ್‌ಗೆ, ಯಾವುದು ಹೆಚ್ಚು ಉಪಯೋಗಕ್ಕೆ ಬರುತ್ತದೆಂಬುದನ್ನು ಕಂಡುಕೊಳ್ಳಿ, ಆ ಬಳಿಕ, ಈ ಹಿಂದೆ ಹೇಳಿರುವ, ಅಡಿಗೆ ಮನೆಯಲ್ಲಿ ಉಪಯೋಗಕ್ಕೆ ಬರುವ, ತಂತ್ರ ಸಾಧನ (Gadgets) ಗಳನ್ನು ತಯಾರಿಸಿ.

.....ಮುಂದುವರೆಯುತ್ತದೆ

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227




***You are a product of your Environment. So choose the Environment that will Best Develop You towards your Objective. Analyze your life in terms of its Environment. Are the things around you helping you towards success - or are they holding you back?***

***- W Clement Stone***




**ಸಂಚಿಕೆಯ ವಾರ್ಷಿಕ ಚಂದಾ ರೂ.100/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು

# Gratitude



Smt. B.V. Ramalatha, Joint State Secretary(Guides) & Smt. B.V. Ramarathna, Asst. State Commissioner(Guides) have donated ` 2 Lakhs to Bharat Scouts & Guides, Karnataka for Infrastructure Development Works of Shanthi Gruha Scouts & Guides Training & Camping Centre, Bangalore.

They have donated this amount to Commemorate the merory of their Parents Late Sri Gudibande B.V. Acharya and Smt. Seethamma. It is a co-incidence that Sri B.V. Acharya was a Trained Scout Master during the year 1923. The BS&G, Karnataka records its appriciation and Conveys its thanks to Smt. B.V. Ramalatha and Smt. B.V. Ramarathna for the generous donation to the Movement.

State Secretory



27 ರಿಂದ 30 ಏಪ್ರಿಲ್ 2014ರವರೆಗೆ ಮಂಗಳೂರಿನ ದೇರಳ ಕಟ್ಟೆ, ವಿದ್ಯಾರತ್ನ ಆಂಗ್ಲ ಮಾಧ್ಯಮ ಶಾಲೆಯಲ್ಲಿ ಜರುಗಿದ ಭಾವೈಕ್ಯತಾ ಶಿಬಿರವನ್ನು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಕೆ. ಸುಧಾಕರ್ ಉದ್ಘಾಟಿಸಿದರು. ಚಿತ್ರದಲ್ಲಿ ಜಿಲ್ಲಾ ಮುಖ್ಯಆಯುಕ್ತ ಶ್ರೀ ಎನ್.ಜಿ. ಮೋಹನ್, ಶಾಲಾ ಸಂಚಾಲಕರಾದ ಫಾದರ್ ಫ್ರಾನ್ಸಿಸ್ ಕ್ರಾಸ್ತ ಮತ್ತು ಇತರ ಜಿಲ್ಲಾ ಪದಾಧಿಕಾರಿಗಳು ಹಾಗೂ ಅತಿಥಿಗಳು ಚಿತ್ರದಲ್ಲಿದ್ದಾರೆ.



ಬಿಜಾಪುರದ ಜಿ.ಆರ್.ಜಿ ಮತ್ತು ವೈ.ಎ.ಪಿ. ಕಾಮರ್ಸ್ ಕಾಲೇಜಿನ ರೋವರ್ಸ್‌ಗಳು ಅಂಧ ಮತ್ತು ಅನಾಥಮಕ್ಕಳ ಸಹಾಯರ್ಥವಾಗಿ ಸಂಗ್ರಹಿಸಿದ ರೂ. 5500/-ಗಳ ಹುಂಡಿಯನ್ನು ಬಿಜಾಪುರದ ಅನಾಥಾಶ್ರಮದ ಕಾರ್ಯದರ್ಶಿಗಳಿಗೆ ನೀಡುತ್ತಿರುವುದು.

Regd. as News Paper (Magazine) RNI No : 13348/1959. Postal Regd. No KA/BGW-549/2012-2014
Permitted to Post under WPP System. Vide No.: WPP-87.
Posted at: Mail Business Centre, Bangalore GPO on 25, 28 & 30 of every month (No. of Pages : 4+20=24)

**25 ರಿಂದ 29 ಏಪ್ರಿಲ್ 2014ರವರೆಗೆ ರಾಜ್ಯ ತರಬೇತಿ ಕೇಂದ್ರ ಕೊಂಡಜ್ಜಿಯಲ್ಲಿ ಜರುಗಿದ ರಾಷ್ಟ್ರಪತಿ ಪೂರ್ವಬಾವಿ ತರಬೇತಿ ಶಿಬಿರದಲ್ಲಿ ಭಾಗವಹಿಸಿದ ಸ್ಕೌಟ್ಸ್‌ಗಳು.**





**25 ರಿಂದ 29 ಏಪ್ರಿಲ್ 2014ರವರೆಗೆ ಡಾ. ಆನಿಬೆಸೆಂಟ್ ರಾಜ್ಯ ತರಬೇತಿ ಕೇಂದ್ರದಲ್ಲಿ ಜರುಗಿದ ರಾಷ್ಟ್ರಪತಿ ಪೂರ್ವಭಾವಿ ತರಬೇತಿ ಶಿಬಿರದ ವಿವಿದ ಚಟುವಟಿಕೆಗಳಲ್ಲಿ ಭಾಗವಹಿಸಿದ ಗೈಡ್ಸ್‌ಗಳು.**







ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕಿನ ಬಾಗೇಶ್‌ಪುರದ ಸ.ಹಿ.ಪ್ರಾ. ಶಾಲೆಯ ಸ್ಕೌಟ್‌ಗಳು ಶ್ರಮದಾನದ ಅಂಗವಾಗಿ ಶಾಲೆಯ ಧ್ವಜಸ್ತಂಭಕ್ಕೆ ಬಣ್ಣಬಳಿಯುತ್ತಿರುವುದು.




ಬಾಗಲಕೋಟೆಯಲ್ಲಿ ಜರುಗಿದ ರೋವರ್ಸ್-ರೇಂಜರ್ಸ್‌ಗಳ ಜಿಲ್ಲಾ ಮಟ್ಟದ ಪದಕ ಪರೀಕ್ಷಾ ಶಿಬಿರದಲ್ಲಿ ಭಾಗವಹಿಸಿದ ರೋವರ್ಸ್-ರೇಂಜರ್ಸ್‌ಗಳು.



5.5.2014 ರಂದು ಹಾಸನ ಜಿಲ್ಲೆ ಚನ್ನರಾಯ ಪಟ್ಟಣದ ಆದಿಚುಂಚನಗಿರಿ ಪ್ರ.ದ. ಕಾಲೇಜಿನ ವತಿಯಿಂದ ನಡೆದ "ಶಾಂತಿ ದೂತ" ತರಬೇತಿ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್-ಗೈಡ್‌ಗಳು.





SCOUTS
Creating a Better World

If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002.    Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore - 560 026**